Photo by A. L. Syed



ಬಹುಮಾನ
ಪಡೆದ ಶೀರ್ಷಿಕೆ

ನಿಡು ಪಯಣದ ಸನ್ನಾಹ

ಕಳಿಸಿದವರು:
ಎಂ. ರಾಮರಾವ್

ಜೂನ್ ತಿಂಗಳಲ್ಲಿ ಪ್ರಾರಂಭ!



ಎ.ವಿ.ಯಂ ರವರ

# ಪೆಣ್

ತಮಿಳು

AVM PRODUCTIONS

G.H.RAO

a TALLAM Release

## ಈ ಸಂಚಿಕೆಯಲ್ಲಿ



ಅಲ್ಲದೆ ಚಿತ್ರಕಥೆ, ನಗೆಹನಿ, ಒಗಟು, ಪದ್ಯಗಳು ಕೂಡಾ ಇವೆ.

# ಚಂದಮಾಮ

ಸಂಚಾಲಕರು : 'ಚಕ್ರಪಾಣಿ'

---

ಕಥೆ, ಕವನ, ಚಿತ್ರ, ಶಿಲ್ಪ ಇವೆಲ್ಲಾ ಲಲಿತಕಲೆಗಳಿಗೆ ಸೇರಿದುವು. ಆದರೆ ಅವುಗಳಲ್ಲಿ ಅಡಗಿರುವ ಕವಿಯ ಭಾವ, ಅರ್ಥ, ಅಂತರಾರ್ಥಗಳನ್ನು ತಿಳಿದು ಕೊಳ್ಳಬೇಕಾದರೆ ನೋಡುವವರ ಮನಸ್ಸೂ ಸಂಸ್ಕಾರ ಹೊಂದಿರಬೇಕಾಗುತ್ತದೆ. ಎಲ್ಲರೂ ಹಾಗೆ ಸಂಸ್ಕಾರ ಹೊಂದಿದವರಲ್ಲದುದರಿಂದಲೇ ದೊಡ್ಡ ದೊಡ್ಡ ಕಲಾವಿದರೂ, ಕವಿಗಳೂ ಬಹಳ ಕಷ್ಟ ನಷ್ಟಗಳಿಂದ ಬಾಳುವೆಯನ್ನು ಕಳೆಯುತ್ತಾರೆ. ಜನರ ಅಲ್ಪ ಸಂಸ್ಕಾರಕ್ಕೆ ತಕ್ಕಹಾಗೆ ಕಲೆಯ ರಚನೆಮಾಡಿ ಒದಗಿಸುವವರು ಒಳ್ಳೆಯ ಗಳಿಕೆಗಾರರಾಗುತ್ತಾರೆ. ಇಲ್ಲಿ ಪ್ರಕಟವಾದ "ಶಿಲ್ಪಿ" ಎಂಬ ಪದ್ಯಕಥೆ ಈ ತತ್ವವನ್ನು ನಿರೂಪಿಸುತ್ತದೆ. ಇನ್ನೂ ಈ ಸಂಚಿಕೆಯಲ್ಲಿರುವ "ಬೆಲೆಯರಿಯದಾತ" "ತೋಳಸಾಕಿದ ಮಗು" ಮೊದಲಾದ ಕತೆಗಳೂ ಉತ್ತಮ ತತ್ವಕಥೆಗಳಾಗಿವೆ. ಓದಿ ಆನಂದಿಸಿರಿ.

---

ಸಂಪುಟ ೧೨ : ಜೂನ್ ೧೯೫೪ : ಸಂಚಿಕೆ ೬





# ಶಿಲ್ಪಿ

(ಪದ್ಯಕಥೆ)

ವಿಖ್ಯಾತನಾದ ಬಾಗ್ದಾದಿನೊಡೆಯ ಕಲೀಫ
ಹಾರೂನ ಅಲ್ ರಷೀದ್ ನ್ಯಾಯಶೀಲ
ಒಂದು ದಿನ ರಾತ್ರಿಯೊಳ್ ಮಾರುವೇಷವನಾಂತು
ನಡೆದ ತಿಳಿಯಲು ಜನರ ಮೇಲುಕೀಳ.

ಸಂದು ಬೀದಿಗಳಲ್ಲಿ ತಿರುಗುತ್ತ ನೋಡುತ್ತ,
ಒಂದು ಬಡಮನೆ ಕಂಡು ನಿಂತನಲ್ಲಿ.
ಶಿಲ್ಪಿಯೊಬ್ಬನು ವಿವಿಧ ಶಿಲ್ಪ ಬೊಂಬೆಗಳನ್ನು
ತಲೆವಾಗಿ ಕೆತ್ತಿಕೊಂಡಿದ್ದನಲ್ಲಿ.

ಸೂಕ್ಷ್ಮಭಾವಗಳಿಂದ ಲಲಿತ ಸುಂದರವಾಗಿ
ವಿಧವಿಧದ ದಿವ್ಯಾರ್ಥ ಕೊಡುವ ಬೊಂಬೆ
ಕಲೆಯ ಕೈವಾಡಗಳ ಸುಳಿಸುಳಿದು ತೋರ್ಪ,ವರ
ಕಲೆಯ ಕಂಡ ಕಲೀಫ ಕಣ್ಣು ತುಂಬೆ.

ಎನಿತೊ ಜನರಾಚೀಚೆ ನಡೆಯುತಿಹರದ ಕಂಡು
ಕಾಣದಂತವರವರ ದಾರಿ ಹಿಡಿದು.
ಕಲೆಯ ನಿಜತತ್ವಾರ್ಥ ರೂಪಿಪಾ ಶಿಲ್ಪಗಳ
ನೋಡಿ ಕೊಂಬವರಿಲ್ಲ ಬೆಲೆಯನರಿದು.



ಸಾಲು ಸಾಲ್ ಬೊಂಬೆಗಳು ಹಾಗೆ ಹಾಗಿವೆ ಪಾಪ,
ಶಿಲ್ಪಿ ಬಡಕಲನಾಗಿ ಬಾಳುತಿಹನು.
ಇದನೆಲ್ಲ ಮನಗಂಡು, ಮತಿವರ ಕಲೀಫನಾ
ಶಿಲ್ಪಿಯನ್ನೀಕಡೆಗೆ ಬಾರೆಂದನು.

ಕೆಲಸದಲಿ ಲಯನಾದ ಬಡಶಿಲ್ಪಿ ಕೇಳದಿರೆ
'ಎಲವೊ ಬಲುತಿಂದು ಮೈಮರೆತೆಯೇನು?'
ಇದ ಕೇಳಿ ತಲೆಯೆತ್ತಿ ನುಡಿದನಾ ನಿಜಶಿಲ್ಪಿ:
'ತಿನಲೆಲ್ಲಿ ಕಾಸು? ಹಸಿದಿರುವೆ ನಾನು;-

ನೋಡೆನ್ನ ಶಿಲ್ಪಗಳ, ನೋಡೆನ್ನ ಈ ಶ್ರಮವ
ನೋಡಿ ನೋಡದೆ ಪೋಪರೆಲ್ಲರೊಲು ನೀನೆ?
ಏನೊ, ನಾ ಕೂಳುಂಡು ದಿನವೆರಡು, ಈ ಕಲಾ
ಸ್ಫೂರ್ತಿಯೊಂದಿದೆ ನನಗೆ, ಅಷ್ಟೆ ತಾನೆ?'

'ಆದ ರೀಗಿದ ಕೊಳ್ಳು' ಎಂದೊಂದು ವರಹವನು
ಶಿಲ್ಪಿಗಿತ್ತಿಂತೆಂದನಾ ಕಲೀಫ

'ಶಿಲ್ಪಿವರ್ಯನೆ ನನ್ನ ಮಾತು ಕೇಳಂತೆ ನಡೆ,
ಬೆಳಗುವುದು ನಿನ್ನ ಬಾಳುವೆಯ ದೀಪ.

ನಿನ್ನ ಈ ಶಿಲ್ಪಗಳ ತತ್ವಗಳ ಹಿರಿತನವ
ತಿಳಿವ ಮತಿಯಿಲ್ಲ ಪಾಮರ ಜನತೆಗೆ;
ಉನ್ನತಾಶಯ ಬಿಟ್ಟು, ಕಲೆಯ ತತ್ವವ ಕಟ್ಟಿ
ಇದ್ದುದಿದ್ದಂತೆ ತೋರಿಸು ಜನತೆಗೆ.

ಕುದುರೆಗಳ, ವಸ್ತುಗಳ, ಗುಡಿಗೋಪುರಂಗಳಂ
ಭಿಕ್ಷುಕರ, ರಮಣಿಯರ ಬೊಂಬೆಮಾಡು.
ಸಾಲು ಸಾಲಾಗಿಟ್ಟು ಬೆಲೆ ಹೆಚ್ಚು ಪೇಳಾಗ
ಧನಿಕನಾಗುವಿ ಬೇಗ, ಮಾಡಿ ನೋಡು.'

ಈ ಬೋಧೆಯಂತೆಯೇ ಕಲೆಯ ಗೊಡವೆಯ ಬಿಟ್ಟು
ಜನತೆ ಮೆಚ್ಚುವ ತೆರದಿ ಬೊಂಬೆಗೈದು
ಇರಿಸಿದಂ ಜನರೆಲ್ಲ ನೆರೆಬಂದು ಕೊಳುತಿರಲ್,
ಧನಿಕನಾದಾ ಶಿಲ್ಪಿ ಕಲೆಯ ತೊರೆದು.

"ಮಾರಂಗ"





# ಬೆಲೆಯರಿಯದಾತ

ಹಿಂದೆ ಒಂದಾನೊಂದುಸಾರಿ ಮಗಧರಾಜನು ಆಳುತ್ತಿರುವ ಕಾಲದಲ್ಲಿ ಬೋಧಿಸತ್ವನು ಒಂದು ಆನೆಯ ರೂಪವನ್ನು ತಾಳಿದನು. ಬಿಳುಪಾದ ಆ ಆನೆ ಐರಾವತವನ್ನು ಹೋಲುತಿತ್ತು. ಅದು ನೋಡಲು ತುಂಬಾ ಮುದ್ದಾಗಿತ್ತು. ಆದುದರಿಂದ ಮಗಧದೇಶದ ಅರಸ ಆ ಆನೆಯನ್ನು ರಾಜಾಸ್ಥಾನದ ಶ್ರೇಷ್ಠ ಗಜವನ್ನಾಗಿ ಮಾಡಿಕೊಂಡ.

ಒಂದು ಹಬ್ಬದ ದಿವಸ ಮಗಧರಾಜ್ಯವನ್ನೆಲ್ಲಾ ದೇವಲೋಕವನ್ನು ಮೀರಿಸುವಂತೆ ಅಲಂಕರಿಸಲಾಗಿತ್ತು. ಅತಿ ವೈಭವವಾಗಿ ನಗರದಲೆಲ್ಲಾ ಮೆರವಣಿಗೆ ನಡೆಯಿಸಲು ಏರ್ಪಾಟಾಗಿತ್ತು. ಆದುದರಿಂದ ರಾಜಾಸ್ಥಾನದ ಗಜವನ್ನು ತುಂಬಾ ಆಕರ್ಷಣೀಯವಾಗಿ ಅಲಂಕರಿಸಿದರು. ಸೈನಿಕರ ತಂಡಗಳು ಹಿಂದೆ ಮತ್ತು ಮುಂದೆ ನಡೆಯುತ್ತಿರಲು ಮೆರವಣಿಗೆ ಬಹಳ ವೈಭವದಿಂದ ಸಾಗುತಿತ್ತು.

ದಾರಿ ಯುದ್ದಕ್ಕೂ ಜನ ಉತ್ಸಾಹದಿಂದ "ಆಹಾ! ಏನು ಆ ಆನೆಯ ಠೀವಿ. ಎಂತಹ ಸೌಂದರ್ಯ. ಏನದರ ಗಂಭೀರಗತಿ! ಇದು ನಿಜವಾಗಿ ಚಕ್ರವರ್ತಿಯ ಆಸ್ಥಾನದಲ್ಲಿರಬೇಕಾದ ಆನೆ" ಎಂದು ಬಗೆಬಗೆಯಾಗಿ ಹೇಳಿಕೊಂಡು ಮೆಚ್ಚಿಕೊಳ್ಳುತ್ತಿದ್ದರು.

ಈ ಮಾತುಗಳನ್ನು ಕೇಳಿ ರಾಜನು ಸಂತಸಪಡುವ ಬದಲಾಗಿ ಅಸೂಯೆತಾಳಿದನು. ಆ ಬಿಳಿಯಾನೆಯಮೇಲೆ ಆತನಿಗೆ ವಿನಾಕಾರಣವಾಗಿ ದ್ವೇಷಮೂಡಿತು. ಇದನ್ನು ಕೊಲ್ಲಿಸುವವರೆವಿಗೂ ತನಗೆ ನಿದ್ದೆಬಾರದು, ಎನ್ನುವಷ್ಟು ದ್ವೇಷಭಾವ ವುಂಟಾಯಿತು.

ಮಾರನೇಯ ದಿನ ಮಾವಟಿಗನನ್ನು ಕರೆಯಿಸಿ "ಮಾವುತನೇ ಈ ಆನೆ ಸುಶಿಕ್ಷಿತವಾಗಿರುವುದೇ?" ಎಂದು ಕೇಳಿದ ರಾಜ.

"ಬಹಳ ಒಳ್ಳೆ ತರಬೇತು ಪಡೆದಿದೆ, ಮಹಾಸ್ವಾಮಿ" ಎಂದ ತಡಬಡಿಸದೆ.

"ಇಲ್ಲ, ಹಾಗೆಂದಿಗೂ ಇಲ್ಲ. ಇದೊಂದು ತೋರಿಕೆಗೆ ಮಾತ್ರವಾದ ಅಪ್ರಯೋಜಕ ಆನೆಯೆಂದು ನನ್ನ ಅಭಿಪ್ರಾಯ" ಎಂದ ರಾಜ. ಅದಕ್ಕೆ ಮಾವುತನು 'ಮನ್ನಿಸಬೇಕು

ಯಚ್. ನಾರಾಯಣರಾವ್

ಮಹಾಪ್ರಭುಗಳು. ಇದು ಒಳ್ಳೆಯ ಶಿಕ್ಷಣ ಪಡೆದು, ಒಳ್ಳೆಯ ಸಂಪರ್ಕದಲ್ಲಿ ಬೆಳೆದಿದೆ. ಒಳ್ಳೆಯ ಬುದ್ಧಿಯೂ ಇದೆ" ಎಂದ ಮತ್ತೆ.

"ನೀನು ಹೇಳಿದಂತೆ ಆ ಆನೆ ಸುಶಿಕ್ಷಿತವಾಗಿದ್ದರೆ, ಆ ಪರ್ವತದ ಶಿಖರವನ್ನು ಏರಬಲ್ಲುದೇ?" ಎಂದು ಕೇಳಿದ ರಾಜ.

"ಅಗತ್ಯವಾಗಿ, ಮಹಾಸ್ವಾಮಿ" ಎಂದು ಆನೆಯಮೇಲೆ ಕುಳಿತುಕೊಂಡು, ಅದನ್ನು ಪರ್ವತ ಶಿಖರಕ್ಕೆ ಕರೆದೊಯ್ದ. ಅದನ್ನು ನೋಡಲು ಆತನ ಹಿಂದೆಯೇ ರಾಜನೂ, ಆತನ ಪರಿವಾರವೂ ಶಿಖರವನ್ನೇರಿದರು.

ಒಂದುಕಡೆ ಆ ಶಿಖರ ತುಂಬಾ ಕಡಿದಾಗಿತ್ತು. ಅಲ್ಲಿ ಆನೆಯನ್ನು ನಿಲ್ಲಿಸುವಂತೆ ಆಜ್ಞೆಮಾಡಿದ ರಾಜ.

"ನಿನ್ನ ಆನೆ ತುಂಬಾ ಉತ್ತಮವಾದುದೆಂದಲ್ಲವೇ ನಿನ್ನವಾದ. ಹಾಗಾದರೆ ಅದನ್ನು ಮೂರು ಕಾಲುಗಳಮೇಲೆ ನಿಲ್ಲಿಸು ನೋಡೋಣ ಎಂದನು ಮತ್ತೆ"

ಕೂಡಲೇ ಮಾವುತನು ಆನೆಗೆ ಅಂಕುಶದಿಂದ ಸಂಜ್ಞೆಮಾಡಿ "ಅಣ್ಣಾ ಮಹಾರಾಜರ ಆಜ್ಞೆ ಯಾಗಿದೆ, ಮೂರು ಕಾಲುಗಳ ಮೇಲೆ ನಿಂತುಕೋ" ಎಂದ. ಅದು ನಿಂತುಕೊಂಡಿತು.

"ಚೆನ್ನಾಗಿದೆ. ಎಲ್ಲಿ ಮುಂಗಾಲುಗಳ ಮೇಲೆ ನಿಲ್ಲಲಿ, ನೋಡೋಣ" ಎಂದ ಮಹಾರಾಜ. ತನ್ನ ಚಾಕಚಕ್ಯತೆಯನ್ನು ತೋರಿಸುವಂತೆ ಆನೆಗೆ ಸಂಜ್ಞೆಮಾಡಿದ ಮಾವುತ. ಆ ಬಾರಿಯೂ ಆ ಮಹಾ ಆನೆ ಹಾಗೆಯೇ ಮಾಡಿತು.



ಅರಸನು ಸುಮ್ಮನಾಗದೆ "ಈಗ ಹಿಂಗಾಲುಮೇಲೆ ನಿಂತುಕೊಳ್ಳಲಿ" ಎಂದ. ಅದನ್ನುಸಹ ಆ ಚತುರ ಗಜವು ನಿರಾಯಾಸದಿಂದ ಮಾಡಿ ತೋರಿಸಿತು!

ಮತ್ತೂ ಬಿಡದೆ ರಾಜ "ಒಂದು ಕಾಲ ಮೇಲೆ ನಿಲ್ಲುವುದೇ ಈ ಆನೆ?" ಎಂದು ಪ್ರಶ್ನೆ ಹಾಕಿದ. ಆ ಗಜರಾಜನು ಒಂದು ಕಾಲಿನ ಮೇಲೆ ನಿಂತುಕೊಂಡಿತು.

ಈ ರೀತಿಯಾಗಿ ಎಷ್ಟೇ ಸಂಕಷ್ಟಗಳನ್ನು ಕೊಟ್ಟರೂ ಆ ಆನೆ ಪರ್ವತಶಿಖರದಮೇಲಿಂದ ಬೀಳಲಿಲ್ಲ. ರಾಜನ ಕೋರಿಕೆ ನೆರವೇರದಾಯಿತು. ಆತನಿಗೆ ಮುಂದೇನು ಮಾಡಲೂ ಬುದ್ಧಿಯೇ ಬರಲಿಲ್ಲ. ದುರಭಿಮಾನದಿಂದ ಬಹಳಹೊತ್ತು ಯೋಚಿಸಿ "ಎಲೈ, ಮಾವ




ಟಿಗನೇ, ಬಹಳವಾಗಿ ಮಾತನಾಡುವೆ? ಇನ್ನೊಂದು ಪರೀಕ್ಷೆ ಕೊಡುತ್ತೇನೆ. ನಿನ್ನ ಆನೆಯಿಂದ ಮಾಡಿಸು, ನೋಡೋಣ" ಎಂದ ಮಗಧಾಧಿಪತಿ.

ಏನು ಕಾರ್ಯ ವಹಿಸಿದರೂ ಅದನ್ನು ಕಾರ್ಯತಃ ಮಾಡಲು ಸಿದ್ಧನಾದ ಮಾವಟಿಗ.

"ಹಾಗಿದ್ದಲ್ಲಿ, ನಿನ್ನ ಆನೆ ಯಾವ ಆಧಾರವೂ ಇಲ್ಲದಂತೆ ಅಂತರಿಕ್ಷದಲ್ಲಿ ನಡೆದಾಡುವಂತೆ ಮಾಡು" ಎಂದ ರಾಜ.

ಅತ್ಯುನ್ನತವಾದ ಈ ಆನೆಯ ವಿಷಯದಲ್ಲಿ ರಾಜನು ತಳೆದಿರುವ ಕೆಟ್ಟ ಮನೋಭಾವವನ್ನು ಗ್ರಹಿಸಿದ ಮಾವಟಿಗ. ಆದರೆ ಆತನು ಧೈರ್ಯಗುಂದಲಿಲ್ಲ. ಆನೆಯ ಕಿವಿಯಲ್ಲಿ ಗುಟ್ಟಾಗಿ ಹೀಗೆಂದ: "ಅಣ್ಣಾ, ನಿನ್ನನ್ನು ಈ ಶಿಖರದಿಂದ ಕೆಳಗೆ ಉರುಳಿಸಿ ಪ್ರಾಣ ತೆಗೆಯಬೇಕೆಂದು ಈ ರಾಜನ ಆಶಯವಿರುವಂತೆ ತೋರುವುದು. ಅವನು ಬೆಲೆಯರಿಯದ ಪೆದ್ದ. ನಿನಗೆ ನಿಜವಾಗಿ ಶಕ್ತಿಯಿದ್ದರೆ ನನ್ನನ್ನು ಏರಿಸಿಕೊಂಡು ಆಕಾಶಕ್ಕೆ ಹಾರು" ಎಂದು ಸನ್ನೆಮಾಡಿದ.

ಮಹಿಮಾ ಪ್ರಭಾವವುಳ್ಳ ಆ ಆನೆ ತಕ್ಷಣವೇ ಆ ಪರ್ವತ ಶಿಖರದಿಂದ ಆಕಾಶಕ್ಕೆ ಹಾರಿ ವಿಮಾನದಂತೆ ಹೋಗುತಿತ್ತು. ಹಾಗೆ ಹೋಗುವಾಗ ಆನೆಯ ಮೇಲೆ ಕುಳಿತಿದ್ದ ಮಾವಟಿಗನು "ಎಲೈ ರಾಜನೇ, ಈ ಆನೆ ಸಾಮಾನ್ಯವಾದುದೆಂದು ನೀನು ಭಾವಿಸಿರಬಹುದು. ಅಲ್ಲ. ಇದು ಪುಣ್ಯ ಪ್ರಭಾವವಾದುದು. ದೈವಾಂಶ ಸಂಭೂತವಾದುದು. ಬೆಲೆಯರಿಯದ ನಿನ್ನಂತಹವನ ಆಸ್ಥಾನದಲ್ಲಿ ಇದು ಇರುವುದು ಯೋಗ್ಯವಲ್ಲ. ಬೆಲೆಯರಿಯದ ಪೆದ್ದರು ಇಂತಹ ಆನೆಗಳನ್ನೇ ಅಲ್ಲ, ಯಾವುದನ್ನಾದರೂ ಕಳೆದುಕೊಳ್ಳುವರು. ನಿನ್ನ ಐಶ್ವರ್ಯ, ಸಂಪತ್ತು ಹೀಗೆಯೇ ನಿನ್ನಿಂದ ನುಣಿಚಿಕೊಳ್ಳುವುದು. ನಿನ್ನ ಕೀರ್ತಿಯೂ ಸಹ ಹೇಳಹೆಸರಿಲ್ಲದಂತಾಗುವುದು" ಎಂದು ಹೇಳಿ ಹೀಗೆ ಮುಂದುವರೆಸಿದ:

"ದುರ್ಬುದ್ಧಿಯನ್ನು ಉನ್ನತ ಪದವಿಯಲ್ಲಿ ಕೂರಿಸಿದರೆ ಇತರ ಬೆಲೆಯನ್ನು ಅರಿಯದೆ ತನಗೆತಾನೇ ಬಾಧೆಪಡುತ್ತಾನೆ. ತನ್ನ ಅವಿವೇಕವನ್ನು ತಾನೇ ಬಯಲು ಪಡಿಸುತ್ತಾನೆ. ಅದರಿಂದ ಎಲ್ಲರಿಗೂ ಶತ್ರುವಾಗುತ್ತಾನೆ.

ಈ ಪರಮ ಸತ್ಯವನ್ನು ಈಗಲಾದರೂ ನೀನು ತಿಳಿದುಕೋ. ಎಚ್ಚರಿಕೆಯಾಗಿರು."

ಹಾಗೆ ಗಾಳಿಯಲ್ಲಿ ಹಾರುತ್ತಿದ್ದ ಆನೆಯು ಕಾಶೀರಾಜ್ಯವನ್ನು ಸೇರಿ ಅಲ್ಲಿನ ಉದ್ಯಾನ ವನದ ಮೇಲೆ ನಿಂತುಕೊಂಡಿತು. ಗಾಳಿಯಲ್ಲಿ ನಡೆದಾಡುತ್ತಿದ್ದ ಆ ಆನೆಯನ್ನು ಕಂಡ ಕೂಡಲೇ ನಗರದಲ್ಲೆಲ್ಲಾ ಕೋಲಾಹಲವೆದ್ದಿತು. ಜನರೆಲ್ಲಾ ಆಶ್ಚರ್ಯಚಕಿತರಾಗಿ ಅದನ್ನೇ ಬೆರಗುಗಣ್ಣುಗಳಿಂದ ನೋಡುತ್ತಿದ್ದರು.

ಈ ವಿಚಾರ ನಿಮಿಷ ಮಾತ್ರದಲ್ಲಿ ರಾಜನಿಗೂ ತಿಳಿಯಿತು. ತತ್‌ಕ್ಷಣವೇ ಕಾಶಿರಾಜನು ಆ ಆನೆ ನಿಂತಿದ್ದ ಸ್ಥಳಕ್ಕೆ ಬಂದು "ಎಲೈ, ಗಜರಾಜನೇ, ನನ್ನ ರಾಜ್ಯಕ್ಕೆಬಂದು ನನ್ನನ್ನು ಉದ್ಧಾರಮಾಡು. ಕೆಳಗೆ ಬಂದು ನಿಲ್ಲು" ಎಂದು ಪ್ರಾರ್ಥಿಸಿಕೊಂಡ.

ಕೂಡಲೇ ಆನೆಯ ರೂಪದಲ್ಲಿದ್ದ ಬೋಧಿಸತ್ವನು ಆಕಾಶದಿಂದ ಕೆಳಗೆ ಇಳಿದು ಬಂದನು. ಹಾಗೆ ಬಂದು ರಾಜನಿಗೆ ತನ್ನ ಸೊಂಡಲಿನಿಂದ ನಮಸ್ಕಾರ ಮಾಡಿದ. ಕಾಶಿರಾಜನು ನಿಜಾಂಶವನ್ನು ತಿಳಿಸುವಂತೆ ಕೇಳಲು, ನಡೆದ ವಿಷಯವನ್ನೆಲ್ಲಾ ಮಣಿಪೋಣಿಸಿದಂತೆ ಹೇಳಿದ ಮಾವಟಿಗ. ರಾಜನಿಗೂ, ಮಾವಟಿಗನಿಗೂ ಅಮಿತಾನಂದವುಂಟಾಯಿತು.

ಆ ಆನೆಯನ್ನು ಅಲಂಕರಿಸಿ, ದಿವ್ಯಸುಂದರವಾದ ಲಾಯದಲ್ಲಿ ಸಾಕಲು ಏರ್ಪಡಿಸಿದರು. ಅಪರೂಪವೂ, ಅಪೂರ್ವವೂ ಆದ ಆ ಬಿಳಿಯಾನೆಯನ್ನು ತನ್ನ ಪ್ರಾಣ ಸಮಾನವಾಗಿ ನೋಡಿಕೊಳ್ಳುತ್ತಿದ್ದ ರಾಜ. ಅಷ್ಟೇ ಅಲ್ಲ, ತನ್ನ ರಾಜ್ಯವನ್ನು ಮೂರು ಭಾಗಗಳನ್ನಾಗಿ ವಿಂಗಡಿಸಿ, ಒಂದು ಭಾಗವನ್ನು ಆನೆಯರೂಪದಲ್ಲಿದ್ದ ಬೋಧಿಸತ್ವನಿಗೂ, ಇನ್ನೊಂದನ್ನು ಮಾವುತನಿಗೂ ಕೊಟ್ಟು, ಉಳಿದ ಭಾಗವನ್ನು ತಾನಿಟ್ಟುಕೊಂಡ.

ಅನಿರೀಕ್ಷಿತವಾಗಿ ಇಂತಹ ಗಜವು ತನ್ನ ಆಸ್ಥಾನಕ್ಕೆ ಬಂದುದು ಒಂದು ಶುಭ ಚಿಹ್ನೆಯೆಂದು ಭಾವಿಸಿದ ರಾಜ. ಬೋಧಿಸತ್ವನು ಭೂಮಿಯ ಮೇಲೆ ಅಡಿಯಿಟ್ಟ ಕ್ಷಣದಿಂದ ಕಾಶಿರಾಜನ ಐಶ್ವರ್ಯ ಸಂಪತ್ತುಗಳು ಹೆಚ್ಚಿದವು. ಕಾಶಿರಾಜನ ಪ್ರಖ್ಯಾತಿ ಪ್ರತಿಷ್ಠೆಗಳು ತುಂಬಾ ಅಭಿವೃದ್ಧಿಯಾದವು.



# ಪ್ರತಿಫಲ



ರಾಮಯ್ಯನೊಬ್ಬ ತೋಟದ ಮಾಲಿ. ಒಂದು ದಿನ ಆತನು ತೋಟದಲ್ಲಿ ಗಿಡಗಳಿಗೆ ಪಾತಿ ಮಾಡುತ್ತಿದ್ದ. ಇದ್ದಕ್ಕಿದ್ದಂತೆಯೇ ಹಿಂದಿನಿಂದ ಟಿಕ್‌ಟಿಕ್ ಎಂದು ಬೂಡ್ಸಿನ ಶಬ್ದ ಕೇಳಿಸಿತು. ಸರಕ್ಕನೆ ಹಿಂತಿರುಗಿ ನೋಡಿದ ರಾಮಯ್ಯ. ಆತನ್ಯಾರೋ ಒಬ್ಬ ಸಂಪನ್ನಗೃಹಸ್ಥನಂತೆ ಕಂಡುಬಂದ. ಆ ಕೋಟೂ, ಬೂಟೂ, ಹ್ಯಾಟೂ, ಕನ್ನಡಗಳನ್ನು ನೋಡಿದರೆ ಆತನು ಗಣ್ಯಮನುಷ್ಯನೆಂದು ಭಾಸವಾಗುತಿತ್ತು.

ರಾಮಯ್ಯ ವಿನಯದಿಂದ ಎದ್ದುನಿಂತು ಆತನಿಗೆ ನಮಸ್ಕಾರಮಾಡಿದ.

"ಅಪ್ಪಾ, ಮಾಲಿ ರಾಮಯ್ಯ ಅಂದರೆ ನೀನೇಯೋ" ಎಂದು ಕೇಳಿದ.

"ಹೌದು ಬುದ್ಧಿ" ಎಂದ ರಾಮಯ್ಯ.

"ನೀನು ಹತ್ತುವರ್ಷಗಳ ಕೆಳಗೆ ಯಾರ ಹತ್ತಿರ ಕೆಲಸಕ್ಕಿದ್ದೆಯೋ ಜ್ಞಾಪಕವಿದೆಯೆ?"

"ಅಯ್ಯೋ, ಇಲ್ಲವೇ? ಜ್ಞಾಪಕವಿಲ್ಲದೆ ಉಂಟೇ? ಮಹರಾಯರು ಸುಬ್ಬರಾಯರ ತೋಟದ ಮಾಲಿಯಾಗಿದ್ದೆ. ಧರ್ಮಾತ್ಮರು. ಅಡವಿಗೆ ಹೋಗಿ ಅವರ ಹೆಸರು ಹೇಳಿದರೂ ಅನ್ನ ಸಿಕುತ್ತದೆ. ಅವರು ಕಣ್ಣಿಗೆ ಕಾಣಿಸದೆ ಎಲ್ಲೋ ವಿದೇಶಕ್ಕೆ ಹೊರಟು ಹೋದರು ಸ್ವಾಮಿ. ಇಲ್ಲದಿದ್ದರೆ ಅವರ ಮನೆಗೆಲಸವನ್ನು ಈ ಜನ್ಮದಲ್ಲಿ ಬಿಡುತ್ತಿದ್ದೆನೇ?" ಎಂದು ತನ್ನ ಹಿಂದಿನ ಯಜಮಾನರಮೇಲೆ ತನಗಿರುವ ಅಭಿಮಾನವನ್ನು ಸೂಚಿಸಿದ.

"ಹೌದು... ಅವರಲ್ಲಿ..." ಎಂದು ಸುಮ್ಮನಾದ ಆತ.

"ಸೌಖ್ಯವಾಗಿದ್ದಾರೆ ತಾನೇ ಸ್ವಾಮಿ" ಎಂದು ಆತುರ ಕಾತುರ ಧ್ವನಿಯಿಂದ ಕೇಳಿದ ರಾಮಯ್ಯ.

"ಅದೇ ಹೇಳಬೇಕೆಂದಿದ್ದೆ. ಪಾಪ, ಸುಬ್ಬರಾಯರು ಅಲ್ಲಿ ಮರಣ ಹೊಂದಿದರು" ಎಂದ ಆ ಹೊಸ ಮನುಷ್ಯ

ಈ ಮಾತು ಕೇಳಿ ರಾಮಯ್ಯ ಬಹಳ ಮರುಗಿದ; ವಿಲಪಿಸಿದ. ಸ್ವಲ್ಪ ಹೊತ್ತಿನ ನಂತರ ಚೇತರಿಸಿಕೊಂಡು, ಹಳೆಯದನ್ನು ನೆನೆಸಿಕೊಳ್ಳುತ್ತ "ಆಹಾ ನಮ್ಮ ರಾಯ

ಎಂ. ದಾಸಪ್ಪ

ರಂತಹ ಮನುಷ್ಯ ಈ ಲೋಕದಲ್ಲೇ ಇಲ್ಲ. ಧರ್ಮಪ್ರಭುಗಳು" ಎಂದು ಬಾಯಿ ತುಂಬಾ ಹೊಗಳಲು ಆರಂಭಿಸಿದ. ಆಮೇಲೆ ಹೊಸ ಬನನ್ನು ಕುರಿತು "ಸ್ವಾಮಿ, ನೀವು ಅವರ ಬಂಧುಗಳೆ?" ಎಂದು ಕೇಳಿದ ರಾಮಯ್ಯ.

ಅದಕ್ಕೆ ಆತನು "ಅಲ್ಲ, ನಾನು ಅವರ ಲಾಯರ್. ರಾಯರು ಮರಣಕಾಲಕ್ಕೆ ಮುಂಚೆ ಒಂದು ಉಯಿಲು ಬರೆಯಿಸಿದ್ದರು. ಅದರಲ್ಲಿ ನಮ್ಮೂರಿನ ಪಾಠಶಾಲೆಗೆ, ವೈದ್ಯಶಾಲೆಗೆ, ಗ್ರಂಥಾಲಯಕ್ಕೆ ಹೀಗೆ ಇನ್ನೂ ಕೆಲವಾರು ಸಂಸ್ಥೆಗಳಿಗೆ ಹಣವನ್ನು ದಾನ ಮಾಡಿದ್ದಾರೆ...." ಎಂದ. ಮಾಲಿ ಈ ವಿವರಗಳನ್ನು ಕೇಳಿ ಮನಸಾರೆ ಆನಂದಿಸಿದ.

ಆ ತರುವಾಯ ಲಾಯರು ತನ್ನ ಕಿಸೆಯಿಂದ ಒಂದು ಥೈಲಿಯನ್ನು ತೆಗೆದು "ಅಪ್ಪಾ ರಾಮಯ್ಯಾ, ಇದೋ ಇದನ್ನು ನಿನಗೆ ಕೊಡುವಂತೆ ಹೇಳಿದ್ದಾರೆ, ರಾಯರು" ಎಂದು ಹೇಳಿ ಚೀಲವನ್ನು ಅವನಿಗೆ ಕೊಟ್ಟ.

ರಾಮಯ್ಯ ಆಶ್ಚರ್ಯವನ್ನು ತಾಳಲಾರದೆ ಅದನ್ನು ನಡುಗುವ ಕೈಗಳಿಂದ ಸ್ವೀಕರಿಸಿದ.

ಅದೊಂದು ಸೀಲು ಹಾಕಿದ ಥೈಲಿ. ಅದನ್ನು ಹೇಗೆ ತೆಗೆಯಬೇಕೋ ರಾಮಯ್ಯನಿಗೆ ತಿಳಿಯದು. ಆದುದರಿಂದ "ಸ್ವಾಮಿ, ಇದೇನೋ ಸ್ವಲ್ಪ ತೋರಿಸಿಕೊಡುವಿರಾ?" ಎಂದು ಲಾಯರನ್ನೇ ಕೇಳಿದ.

ಆತನು ಸೀಲು ತೆಗೆದು ನೋಡಲು, ಅದರಲ್ಲಿ ಎರಡು ಸಾವಿರ ರೂಪಾಯಿಗಳಿವೆ!




ರಾಮಯ್ಯ ತನ್ನ ಕಣ್ಣುಗಳನ್ನು ತಾನೇ ನಂಬಲಿಲ್ಲ. ಕಂಪಿಸುತ್ತಿರುವ ಕೈಗಳಿಂದ ಆ ಚೀಲವನ್ನು ಇಸುಕೊಂಡು, ಲಾಯರಿಗೆ ನಮಸ್ಕಾರ ಮಾಡಿ, ತನ್ನ ಗುಡಿಸಲನ್ನು ಸೇರಿಕೊಂಡ. ಒಂದೇಸಾರಿ ಇಷ್ಟು ಹಣವನ್ನು ನೋಡಿದ್ದು ಅದೇ ಮೊದಲನೆಯಸಾರಿ, ರಾಮಯ್ಯನಿಗೆ. ನಿಜ ನುಡಿಯಬೇಕೆಂದರೆ ಆತನು ಕನಸಿನಲ್ಲೂ ನೆನೆಸಿರಲಾರದ ಗಹನ ವಿಷಯವದು.

ಸುಬ್ಬರಾಯರು ವಿದೇಶಕ್ಕೆ ಹೋಗುವ ಮೊದಲು ಅವರ ಮನೆಯಲ್ಲಿ ಮಾಲಿಯಾಗಿ ಕೆಲಸ ಮಾಡುತ್ತಿದ್ದ ರಾಮಯ್ಯ. ಅವನು ನಂಬಿಗಸ್ಥ ಆದರೆ ರಾಯರು ವಿದೇಶಕ್ಕೆ ತೆರಳಿದಮೇಲೆ ಅವರ ವಹಿವಾಟನ್ನೆಲ್ಲಾ ಒಬ್ಬ ಗುಮಾಸ್ತೆ ನೋಡಿಕೊಳ್ಳುತ್ತಿದ್ದ. ಅವನೇ ಬಹಳ ಮೋಸಗಾರ. ರಾಮಯ್ಯನಿಗೂ,




ಗುಮಾಸ್ತೆಗೂ ಮನಸ್ತಾಪ ಬಂದು, ರಾಮಯ್ಯ ರಾಯರ ಮನೆಯ ಚಾಕರಿ ಬಿಟ್ಟುಬಿಡಬೇಕಾಯಿತು.

ಈಗ ರಾಮಯ್ಯ ಒಬ್ಬ ಮಾರ್ವಾಡಿ ಶೇಟ್ ಮನೆಯಲ್ಲಿ ಜೀತಕ್ಕಿದ್ದ. ಆ ಯಜಮಾನನ ಮಗ ಗುಲಾಬ್. ಅವನಿಗೆ ಹತ್ತು ವರ್ಷ ವಯಸ್ಸು. ಬಹಳ ಚೂಟಿ. ಆದರೆ ಪಕ್ಕಾ ಕಳ್ಳ. ಆ ಹುಡುಗ ರಾಮಯ್ಯನೊಂದಿಗೆ ತುಂಬಾ ಸಲುಗೆಯಿಂದ ಇರುತ್ತಿದ್ದ. ಮೂರು ಹೊತ್ತೂ ರಾಮಯ್ಯನ ಗುಡಿಸಿಲಿನ ಹತ್ತಿರವೇ ಅವನು ಆಡಿಕೊಂಡಿರುತ್ತಿದ್ದ. ರಾಮಯ್ಯನಿಗೆ ಹಣದ ಚೀಲ ಲಭಿಸಿದ ಕೂಡಲೇ ಅನೇಕ ಸಮಸ್ಯೆಗಳು ಎದುರಾದವು. ಅವನ ಗುಡಿಸಲಿಗೆ ಬಾಗಿಲುಗಳಿರಲಿಲ್ಲ. ಗುಲಾಬ್ ಸದಾ ಅಲ್ಲೇ ಕಾಲ ಕಳೆಯುವನು. ಅವನನ್ನು ಬರಬೇಡವೆಂದು ಹೇಳುವುದು ಸಾಧ್ಯವಾಗದ ಮಾತು. ಈಗ ಏನು ತಾನೇ ಮಾಡುವುದು?

ಈ ರೀತಿ ಯೋಚಿಸಿ, ಯೋಚಿಸಿ, ಒಂದು ದಿನ ಯಾರೂ ಇಲ್ಲದ ಸಮಯದಲ್ಲಿ ತೋಟದಲ್ಲಿದ್ದ ಒಂದು ಭಾರಿ ಆಲದಮರವನ್ನು ಹತ್ತಿ ಅದರ ಪೊಟ್ಟರೆಯಲ್ಲಿ ಆ ಚೀಲವನ್ನು ಬಚ್ಚಿಟ್ಟು ನೆಮ್ಮದಿಯಿಂದ ಮನೆಗೆ ಹೋದ. ಇನ್ನು ಮೇಲೆ ಆ ಹಣದ ವಿಷಯವಾಗಿ ಭಯಪಡಬೇಕಾದ ಪ್ರಮೇಯವೇ ಇಲ್ಲವೆಂದು ಆತನಿಗೆ ಧೈರ್ಯವುಂಟಾಯಿತು.

ಯಜಮಾನನ ಹತ್ತಿರ ಹೋಗಿ ' ಸ್ವಾಮಿ, ನಾನು ಮುದುಕನಾದೆ. ನಮ್ಮ ಹಳ್ಳಿಗೆ ಹೋಗಬೇಕು. ಅಲ್ಲೇ ಕಾಲಕಳೆಯುವ ಆಶೆಯಿದೆ. ಅಪ್ಪಣೆಕೊಡಿ ' ಎಂದು ಹೇಳಿ ಹೋಗಬೇಕೆಂದು ರಾಮಯ್ಯ ಯೋಚಿಸಿದ.

ತನಗೆ ಬರಬೇಕಾದ ಸಂಬಳವನ್ನು ತೆಗೆದುಕೊಂಡು, ಮಾರನೇಯ ದಿನ ಬೆಳಗ್ಗೆ ತನ್ನ ಹಳ್ಳಿಗೆ ಪ್ರಯಾಣಬೆಳೆಸಬೇಕೆಂದು ರಾಮಯ್ಯ ನಿರ್ಧರಿಸಿದ.

ಮತ್ತೆ ಯಾರಿಗೂ ತಿಳಿಯದಂತೆ ಮರದ ಪೊಟ್ಟರೆಯಲ್ಲಿರುವ ತನ್ನ ಚೀಲವನ್ನು ತೆಗೆದುಕೊಂಡು ತನ್ನ ಹಳ್ಳಿ ಸೇರಿ, ಆ ಹಣದಿಂದ ಸುಖವಾಗಿ ಕಾಲಕ್ಷೇಪ ಮಾಡಬೇಕೆಂದು ಅವನ ಹಿರಿಯಾಶೆಯಾಗಿತ್ತು.

ರಾಮಯ್ಯನೇನೋ ಈ ಆಶೆಗಳನ್ನಿಟ್ಟುಕೊಂಡಿದ್ದ. ಆದರೆ ಕಥೆ ಅಡ್ಡ ತಿರುಗಿತು. ಗುಲಾಬ್ ರಾಮಯ್ಯ ಚೀಲ ಬಚ್ಚಿಡುತ್ತಿರುವು

ದನ್ನು ಹೇಗೋ ಕಂಡುಕೊಂಡು, ಆ ಮರದ ಪೆಜ್ಜದಿಂದ ಥೈಲಿಯನ್ನು ಲಪಟಾಯಿಸಿ, ಸೀದಾ ಹೋಗಿ ತನ್ನ ತಂದೆಗೆ ಅದನ್ನು ಕೊಟ್ಟ. "ಅಪ್ಪಾ, ನಮ್ಮ ತೋಟಮಾಲಿ ರಾಮಯ್ಯ ಇದನ್ನು ಒಂದೆಡೆ ಬಚ್ಚಿಡುತ್ತಿದ್ದ. ನಾನು ಅದನ್ನು ನೋಡಿ ತೆಗೆದುಕೊಂಡು ಬಂದೆ" ಎಂದ ಸಂತೋಷಾತಿಶಯದಿಂದ.

ಶೇಟ್‌ಗೆ ಅಪರಿಮಿತವಾದ ಸಂತೋಷ ವುಂಟಾಯಿತು. ಆ ಚೀಲದಲ್ಲಿದ್ದ ಹಣವನ್ನು ಎಣಿಸುವ ಗೊಡವೆಯಲ್ಲಿ, ಮಗನು ಹೇಳಿದ ಮಾತುಗಳು ಯಾವುವೂ ಆತನ ಕಿವಿಗೆ ಬೀಳ ಲಿಲ್ಲ. 'ಸರಿಯಾಗಿ ಎರಡುಸಾವಿರ, ಎರಡು ಸಾವಿರ' ಎಂದು ಪದೇ ಪದೇ ಎಣಿಸುತ್ತಿದ್ದ ಸೇಟ್‌ಜಿ. "ಮಗೂ, ಗುಲಾಬ್, ನೀನು ಹೋಗಿ ಆಡಿಕೋಪ್ಪಾ" ಎಂದು ಹೇಳಿ ಮಗ ನನ್ನು ಕಳುಹಿಸಿ, ಮತ್ತೆ ಹಣ ಎಣಿಸುತ್ತಾ ಕುಳಿತುಕೊಂಡ ಶೇಟ್‌ಜಿ.

ಆ ರಾತ್ರಿ ರಾಮಯ್ಯ ಯಜಮಾನನ ಹತ್ತಿರ ಹೋಗಿ "ಸ್ವಾಮಿ ಜರೂರಾಗಿ ನಮ್ಮ ಹಳ್ಳಿಗೆ ಹೋಗಬೇಕಾಗಿ ಬಂದಿದೆ. ಮತ್ತೆ ಯಾವಾಗ ಬರುವೆನೋ ಹೇಳಲಾರೆ ಅಪ್ಪಣೆ ಕೊಡಬೇಕು" ಎಂದ. ಅದಕ್ಕೆ ಯಜಮಾನ "ರಾಮಯ್ಯ, ಸರಿ. ಹೋಗುವ ಮುನ್ನ ಬಂದು ನಿನಗೆ ಬರಬೇಕಾದ ಸಂಬಳ ತೆಗದುಕೊಂಡು ಹೋಗು. ಆದರೊಂದು ಮಾತು, ನಿನಗೆ ಈ ಮುದಿತನದಲ್ಲಿ ಇಷ್ಟು ಸುಲಭವಾದ ಕೆಲಸ ಬೇರೊಂದು ಜಾಗದಲ್ಲಿ ಸಿಗುವುದು ತುಂಬಾ




ಕಷ್ಟ. ಹತ್ತು ವರ್ಷಗಳಿಂದ ನಮ್ಮ ಹತ್ತಿರ ವಿದ್ದೆ. ಈಗ ನೀನು ಬಿಟ್ಟು ಹೋಗುತ್ತಿರುವೆ ನೆಂದರೆ ಏನೋ ಒಂದು ತರಹ ವ್ಯಥೆಯಾಗು ತ್ತದೆ" ಎಂದು ರಾಮಯ್ಯನಲ್ಲಿ ಬಹಳ ಅಭಿ ಮಾನವಿರುವಂತೆ ನಟಿಸಿದ.

ಹೊರಗೆ ಹಾಗೆ ನುಡಿದರೂ, ಅವನ ಅಭಿ ಪ್ರಾಯ ಬೇರೆ. ಈ ಎರಡು ಸಾವಿರ ನಮಗೆ ಸಿಕ್ಕಿದೆ. ಈ ಪೀಡೆ ತೊಲಗಿದರೇನೇ ನಮಗೆ ಕ್ಷೇಮ' ಎಂದು ಶೇಟ್‌ಜಿ ಎಣಿಕೆ. ಮಾರನೆಯ ದಿನ ಬೆಳಿಗ್ಗೆ ರಾಮಯ್ಯ ಸಂಬಳ ತೆಗೆದು ಕೊಂಡು, ಯಾರಿಗೂ ತಿಳಿಯದಂತೆ ಆಲದ ಮರದ ಹತ್ತಿರಕ್ಕೆ ಹೋದ.

ಪೆಜ್ಜದಲ್ಲಿ ತಾನಿಟ್ಟಿದ್ದ ಚೀಲವನ್ನು ಎತ್ತಿ ಕೊಳ್ಳುತ್ತಾ ರಾಮಯ್ಯ ಸಂತೋಷಗೊಂಡ. "ಆಹಾ ಈಗಲೂ ಸತ್ಯವೆಂಬುದು ಪ್ರಪಂಚ

ದಲ್ಲಿದೆ" ಎಂದುಕೊಂಡು ರಾಮಯ್ಯ ತನಗೆ ಬಹುಮಾನವಾಗಿ ಬಂದ ಆ ಚೀಲವನ್ನು ತೆಗೆದುಕೊಂಡು ಹಳ್ಳಿಗೆ ಹೊರಟು ಹೋದ.

ಗುಲಾಬ್ ಸ್ವಲ್ಪ ಹೊತ್ತಾದ ನಂತರ ತಂದೆಯ ಹತ್ತಿರ ಬಂದು "ಅಪ್ಪಾ, ಆ ರಾಮಯ್ಯ ತುಂಬಾ ನಿರ್ಭಾಗ್ಯನಲ್ಲವೇ? ತಾನೇನೋ ಬಹಳ ಬುದ್ಧಿವಂತನೆಂದು ತಿಳಿದಿದ್ದ. ಅವನಿಗೇ ಕೊಟ್ಟೆ ಗಸ್ತು. ಚೀಲ ಕಾಣಿಸದಿರುವುದನ್ನು ಕಂಡು ಆಗಲೇ ಪ್ರಾಣ ಬಿಟ್ಟುಬಿಟ್ಟಿರಬೇಕು. ಪಾಪ, ಅಮಾಯಕ" ಎಂದ.

ಕೂಡಲೇ ಮಗನನ್ನು ಅಪ್ಪಿಕೊಂಡು, ಅವನ ತಲೆಯನ್ನು ನೇವರಿಸುತ್ತಾ "ಲೋ, ಗುಲಾಬ್, ನಾನು ಆ ಚೀಲವನ್ನು ಬಚ್ಚಿಟ್ಟಿರುವ ಸ್ಥಳ ಹರಿಹರ ಬ್ರಹ್ಮಾದಿಗಳಿಗೂ ತಿಳಿಯದು. ಇನ್ನು ಆ ಬಡವ ರಾಮಯ್ಯನಿಗೆ ತಿಳಿಯುವುದೆಂತು?" ಎಂದು ಹೇಳಿ ತನ್ನ ಬುದ್ಧಿವಂತಿಕೆಗೆ ತಾನೇ ತಲೆದೂಗಿದ.

ಕೂಡಲೇ ಗುಲಾಬ್ "ಅಪ್ಪಾ, ಎಲ್ಲಪ್ಪಾ ಬಚ್ಚಿಟ್ಟಿರುವೆ?" ಎಂದು ಆತುರದಿಂದ ಕೇಳಿದ.

"ಸಮೀಪಕ್ಕೆ ಬಾ. ಹೇಳುತ್ತೇನೆ. ಮತ್ತೆ ನೀನು ಯಾರೊಂದಿಗೂ ಹೇಳಿಬಿಡಬೇಡ. ನಾನು ಹೇಳದೇ ಇದ್ದರೆ ಆ ಸ್ಥಳವನ್ನು ಕಂಡು ಹಿಡಿಯಲು ಯಾರಿಗೂ ಸಾಧ್ಯವಿಲ್ಲ" ಎಂದನು ಶೇಟ್ ಜೀ.

"ಅಂತಹ ಸ್ಥಳ ಯಾವುದಪ್ಪಾ. ಹೇಳು. ನಾನು ಯಾರಿಗೂ ಹೇಳಲಾರೆ" ಎಂದ ಗುಲಾಬ್.

ಶೇಟ್ ಜಿ ಮಗನ ಕಿವಿಯಲ್ಲಿ ಮೆಲ್ಲನೆ ಹೀಗೆಂದ: "ಮಗು ಯಾರಿಗೂ ಹೇಳಬೇಡ ಕಂಡೆಯಾ! ನಮ್ಮ ತೋಟದ ಪೂರ್ವದಿಕ್ಕಿನಲ್ಲಿ ದೊಡ್ಡದೊಂದು ಆಲದ ಮರವಿಲ್ಲವೇ, ಅದರ ಪೆಜ್ಜದಲ್ಲಿ ಬಚ್ಚಿಟ್ಟಿದ್ದೇನೆ" ಎಂದ.

ಈ ಮಾತು ಕೇಳಿ ಗುಲಾಬ್ "ಅಯ್ಯೋ, ಎಂಥ ಕೆಲಸ ಮಾಡಿದೆ ಅಪ್ಪಾ. ರಾಮಯ್ಯ ಬಚ್ಚಿಟ್ಟದ್ದೂ ಅದೇ ಸ್ಥಳದಲ್ಲಿಯೇ, ಆ ಮರದ ಪೆಜ್ಜದಿಂದಲೇ ನಾನು ಆ ಥೈಲಿಯನ್ನು ಹಾರಿಸಿದೆ" ಎಂದು ಹೇಳುತ್ತಾ ದಪಕ್ಕನೆ ಕೆಳಗೆ ಕುಸಿದು ಬಿದ್ದುಬಿಟ್ಟ.

ಶೇಟಜಿಯೂ ಓಡಿಹೋಗಿ ಆ ಮರದ ಪೆಜ್ಜವನ್ನು ನೋಡಿ "ಅಯ್ಯೊ" ಎಂದು ಬಿದ್ದು ಬಿಟ್ಟ.








# ಯೋಗಿ ಪುಂಗವ



ಬಹಳ ಕಾಲದ ಹಿಂದೆ ಭದ್ರಾಚಲಕ್ಕೆ ಹೋಗುವ ಹಾದಿಯಲ್ಲಿ ಒಂದು ಅಡವಿಯಿತ್ತು. ಅದರ ಹತ್ತಿರವೇ ಒಂದು ಆಶ್ರಮ. ಆ ಆಶ್ರಮದಲ್ಲಿ ಒಬ್ಬ ಯೋಗಿಪುಂಗವನು ತಪಸ್ಸುಮಾಡುತ್ತಿದ್ದನು. ಆತನು ದೃಢಕಾಯನು. ನಿಗನಿಗ ಹೊಳೆಯುವ ಕಪ್ಪಾದ ಗಡ್ಡವಿತ್ತು ಆತನಿಗೆ. ಆ ಮಹಾನುಭಾವನನ್ನು ನೋಡಿದರೆ ಯಾರಿಗೂ ಸಹ ಆತನಿಗೆ ಕೈಯೆತ್ತಿ ನಮಸ್ಕಾರ ಮಾಡಬೇಕೆಂಬ ಮನಸ್ಸಾಗುತ್ತಿತ್ತು.

ಆ ಯೋಗೀಶ್ವರನು ಈ ಅರಣ್ಯಕ್ಕೆ ಯಾವಾಗ ಬಂದನೋ, ಹೇಗೆ ಬಂದನೋ, ಯಾವಾಗ ಈ ಆಶ್ರಮವನ್ನು ಸ್ಥಾಪಿಸಿದನೋ ಯಾರಿಗೂ ತಿಳಿಯದು. ಆದುದರಿಂದಲೇ ಜನರು ಒಂದೊಂದು ವಿಧವಾಗಿ ಹೇಳಿಕೊಳ್ಳುತ್ತಿದ್ದರು. ಏನೇ ಆಗಲಿ, ಪ್ರಂಪಂಚವನ್ನು ಉದ್ಧಾರ ಮಾಡಲು ಬಂದ ಮಹಾನುಭಾವನೆಂದು ಎಲ್ಲರೂ ನಂಬಿದರು. ಹಾಗೆ ನಂಬಿ, ಮುಕ್ತಿಪಡೆಯಲು ಆತನನ್ನು ಆಶ್ರಯಿಸಿದರು. ಆದರೆ ಆ ಯೋಗಿಪುಂಗವನು ಯಾರೊಂದಿಗೂ ಮಾತನಾಡುತ್ತಿರಲಿಲ್ಲ. ಆತ ಮೌನ ವ್ರತಧಾರಿ. ಆಶ್ರಮದಲ್ಲಿ ತುಸ ಎತ್ತರವಾದ ಪೀಠದಮೇಲೆ ಪದ್ಮಾಸನ ಹಾಕಿ ಕುಳಿತಿರುತ್ತಾನೆ. ಆತನಿಗೆ ಈ ಪ್ರಪಂಚದೊಂದಿಗೆ ಸಂಪರ್ಕವೇ ಇಲ್ಲದಂತೆ ನೋಡಿದವರಿಗೆ ಭಾಸವಾಗುವುದು. ಬಂದು ಹೋಗುವ ಜನರೆಲ್ಲಾ ಭಕ್ತಿಪೂರ್ವಕವಾಗಿ ತಮ್ಮ ಶಕ್ತ್ಯಾನುಸಾರ ಕಾಣಿಕೆಯಿತ್ತು, ಸ್ವಾಮಿಗಳಿಗೆ ನಮಸ್ಕಾರ ಮಾಡಿ ಮುಂದೆ ನಡೆಯುವರು.

ಈ ರೀತಿ ಕಳ್ಳಕಾಕರಿಂದ ತುಂಬಿದ್ದ ಆ ಅರಣ್ಯದಲ್ಲಿ ಈ ಯೋಗಿಪುಂಗವನಿಂದಾಗಿ ಜನ ಸಂಚಾರ ದಿನದಿನಕ್ಕೆ ಹೆಚ್ಚಾಗುತಿತ್ತು. ತತ್ಫಲವಾಗಿ ಅರಣ್ಯ ಪ್ರಾಂತದಲ್ಲಿ ದರೋಡೆ, ಕಳ್ಳತನಗಳು ಕಡಿಮೆಯಾಗಬೇಕಾಗಿತ್ತು. ಆದರೆ ಅಂತಹ ಪ್ರಬಲ ಬದಲಾವಣೆಯೇನೂ ಕಂಡುಬರಲಿಲ್ಲ.

ಅದಕ್ಕೆ ವಿರೋಧವಾಗಿ ಆಶ್ರಮದ ಸಮೀಪದಲ್ಲೇ ಕಳ್ಳತನ, ಪುಂಡುತನಗಳು ಮತ್ತಷ್ಟು ಹೆಚ್ಚಾದುವು. ಒಂದುದಿನ ರಾತ್ರಿ ಹನ್ನೊಂದು

ಕು. ಸರಳ




ಘಂಟೆಯ ಹೊತ್ತಿನಲ್ಲಿ ಒಂದು ಗಾಡಿ ಆ ಮಾರ್ಗವಾಗಿ ಹೋಗುತ್ತಿತ್ತು. ಆ ಗಾಡಿಯಲ್ಲಿ ಮೂವರು ಸ್ತ್ರೀಯರೂ, ಇಬ್ಬರು ಪುರುಷರೂ ಕುಳಿತಿದ್ದರು. ಆ ಸ್ತ್ರೀಯರ ಮೈತುಂಬಾ ಒಡವೆಗಳಿದ್ದುವು. ಹಠಾತ್ತನೆ ಕಳ್ಳರ ಯಜಮಾನ ಆ ಗಾಡಿಗೆ ಅಡ್ಡವಾಗಿ ಬಂದು ನಿಂತ. ಅವನ ರುಮಾಲು, ಕೆಂಗಣ್ಣುಗಳು, ಕೋರೆಮೀಸೆಗಳು ಕೈಯಲ್ಲಿದ್ದ ಆ ಬಲವಾದ ದೊಣ್ಣೆ ಕಂಡು ಆ ಪ್ರಯಾಣಿಕರಿಗೆ ಅರ್ಧ ಜೀವ ಹೋದಂತಾಯಿತು. ಯಾರಿಗೂ ಮಾತೇ ಹೊರಡಲಿಲ್ಲ.

ಅವನು ತನ್ನ ಕೋಲನ್ನು ನೆಲಕ್ಕೆ ಬಡಿಯುತ್ತಾ ಅವರನ್ನು ಸಮೀಪಿಸಿ "ಅಣ್ಣಗಳಿರಾ, ಅಕ್ಕಗಳಿರಾ, ನನ್ನ ಕಸಬು ಕಳ್ಳತನ. ಆದರೂ ನನ್ನದೊಂದು ಪದ್ಧತಿ. ನನಗೆ ಬೇಕಾದುದು ನಿಮ್ಮ ಹಣ; ಪ್ರಾಣವಲ್ಲ. ಮರು ಮಾತನಾಡದೆ ನಗನಾಣ್ಯಗಳನ್ನು ತೆಗೆದು ಕೊಟ್ಟರೆ ಸರಿ. ಇಲ್ಲಾ, ಏನಾದರೂ ದಾಂಧಲೆ ಮಾಡಿದಿರೋ, ನನ್ನ ತಂಡದವರು ಬಂದು ಹೊಡೆದು ಬಡಿದು ಕಿತ್ತುಕೊಳ್ಳುತ್ತಾರೆ. ಅದೋ ನೋಡಿ, ಆ ಮರದ ಹಿಂದೆ ಅವಿತಿಟ್ಟುಕೊಂಡಿರುವ ನನ್ನ ಸಹಾಯಕರು. ಒಂದು ಸಾರಿ ಸಂಜ್ಞೆಮಾಡಿದರೆ ಸಾಕು..."

ಗಾಡಿಯಲ್ಲಿದ್ದವರು ಆ ಕಳ್ಳರ ನಾಯಕನು ತೋರಿಸಿದ ಮರದಕಡೆ ತಮ್ಮ ದೃಷ್ಟಿಹಾಯಿಸಿದರು. ಭೀಕರಾಕೃತಿಯ ಕೆಲವು ತಲೆಗಳು ಕಂಡುಬರಲು ಅವರು ಕಂಗಾಲಾದರು. ಮತ್ತೇನೂ ಮಾಡಲಾರದೆ ಗಂಡಸರು ತಲೆಬಾಗಿಸಿದರು. ಸ್ತ್ರೀಯರು ತಮ್ಮ ಒಡವೆಗಳನ್ನು ಕಳಚಿ, ನಾಯಕನ ಮುಂದಿಟ್ಟರು. ನಾಯಕನು "ನಿಮ್ಮ ಪ್ರಯಾಣವು ಸುಖವಾಗಿ ಸಾಗಲಿ" ಎಂದು ಆಶೀರ್ವಾದಮಾಡಿ, ಅಲ್ಲಿಂದ ಮಾಯವಾದ.

ಮತ್ತೆ ಸ್ವಲ್ಪ ಹೊತ್ತಾದಮೇಲೆ ಅದೇ ದಾರಿಯಲ್ಲಿ ಒಬ್ಬ ವರ್ತಕ ಕಾಲುನಡಿಗೆಯಲ್ಲಿ ಬರುತ್ತಿದ್ದ. ಯಥಾಪ್ರಕಾರ ಕಳ್ಳರ ನಾಯಕನು ವರ್ತಕನನ್ನು ಅಡ್ಡಗಟ್ಟಿ "ಹೊಂ, ಹಣತೆಗೆ, ಇಲ್ಲ ನಿನ್ನ ಪ್ರಾಣಕ್ಕೆ ಸಂಚಕಾರ" ಎಂದು ಅತ್ತ ತೋರಿಸುತ್ತಾ ಬೆದರಿಸಿದ. ಆ ವರ್ತಕನೇನೂ ಸಾಮಾನ್ಯನಲ್ಲ. ಹಠಮಾರಿ, ಯುಕ್ತಿವಂತ. "ನನ್ನ ಹತ್ತಿರ ಸ್ವಲ್ಪ ಹಣವಿದೆ. ಅದೂ ನನ್ನದಲ್ಲ" ಎಂದ.

ಕಳ್ಳರ ಯಜಮಾನ ಆ ಮಾತುಗಳನ್ನು ಕೇಳಿಸಿಕೊಳ್ಳಲಿಲ್ಲ. ದೊಣ್ಣೆ ತಿರುಗಿಸಿ ಜೋರು ಮಾಡಿದ. ಆಗ ವರ್ತಕನು ತನ್ನ ಹತ್ತಿರವಿದ್ದ ಹಣವನ್ನು ಅವನ ಕೈಗೆ ಕೊಡುತ್ತಾ "ಪೊದೆಯ ಹಿಂದೆ ಅಡಗಿಕೊಂಡಿರುವ ಮಹಾನುಭಾವರೇ, ನಿಮ್ಮ ನಾಯಕನಿಗೆ ಸಾವಿರ ವರಹಗಳನ್ನು ಕೊಟ್ಟಿದ್ದೇನೆ. ನೀವು ಮೋಸಹೋಗದೆ ನಿಮ್ಮ ನಿಮ್ಮ ಪಾಲನ್ನು ತೆಗೆದುಕೊಳ್ಳಿ" ಎಂದು ಕೂಗಿದ. ಹೀಗೆ ಕೂಗಾಡುತ್ತಿದ್ದ ವರ್ತಕನ ಬೆನ್ನಿನಮೇಲೆ ಎರಡು ಬಾರಿಸಿದ ಆ ಕಳ್ಳರ ನಾಯಕ. ಏಟಿನಿಂದ ವರ್ತಕ ಓಡಿಹೋಗಿ ಒಂದು ಛತ್ರವನ್ನು ಸೇರಿಕೊಂಡ.




ಅದೇ ಸಮಯದಲ್ಲಿ ಆ ಛತ್ರದಲ್ಲಿ ರಾಜಭಟರೂ, ದಂಡನಾಯಕನೂ ಇಳಿದುಕೊಂಡಿದ್ದರು. ವರ್ತಕನು ಅವರೊಂದಿಗೆ ನಡೆದ ವಿಷಯವನ್ನೆಲ್ಲಾ ಹೇಳಿಕೊಂಡನು. ಆಗ ದಂಡನಾಯಕನು "ಆ ಜಾಗ ನಮಗೆ ತೋರಿಸಿಕೊಡಯ್ಯಾ, ನಿಮುಷಾರ್ಧದಲ್ಲಿ ಹಿಡಿದುಬಿಡುತ್ತೇವೆ" ಎಂದ.

ಎಲ್ಲರೂ ಗುಂಪಾಗಿ ಹೋಗಿ ಕಳ್ಳರಿದ್ದ ಪ್ರದೇಶವನ್ನು ಸೇರಿಕೊಂಡರು. ರಾಜಭಟರು ಮರಗಳಹಿಂದೆ ಅವಿತಿಟ್ಟುಕೊಂಡರು. ವರ್ತಕನು ತನ್ನೊಂದಿಗೆ ದಂಡನಾಯಕನನ್ನು ಮಾತ್ರ ಕರೆದುಕೊಂಡು ಮುಂದೆ ನಡೆದನು. ಇಬ್ಬರೇ ಮನುಷ್ಯರು ಬರುವುದನ್ನು ಕಂಡು ಕಳ್ಳರ ನಾಯಕನು ಅವರನ್ನು ಅಟಕಾಯಿಸಲು ಮುಂದೆ ಬಂದ. "ಹುಂ, ಹಣತೆಗೆಯಿರಿ. ಇಲ್ಲಾ ನಿಮ್ಮ ಪ್ರಾಣಕ್ಕೆ ಮುಪ್ಪು. ಅದೋ ನೋಡಿ, ಆ ಪೊದೆಯ ಹಿಂದಿರುವ ನಮ್ಮ ಬಳಗ" ಎಂದು ತನ್ನ ಕೋಲನ್ನು ನೆಲಕ್ಕೆ ಬಡಿಯುತ್ತಾ ಗಂಭೀರವಾಗಿ ನುಡಿದ ಕಳ್ಳರ ನಾಯಕ.

ಸೇನಾನಾಯಕನು ಕತ್ತಿವರಸೆ, ಗರಡಿ ವಿದ್ಯೆಗಳಲ್ಲಿ ಅರಿತು ನುರಿತವನು. ಕೂಡಲೇ ಸಿಳ್ಳುಹಾಕಿ ಕಳ್ಳರ ನಾಯಕನಮೇಲೇ ಬಿದ್ದ. ಇಬ್ಬರಿಗೂ ಘರ್ಷಣೆ ಆಯಿತು. ದಂಡನಾಯಕನು ಆ ಕಳ್ಳನನ್ನು ಕೆಳಗೆ ಬೀಳಿಸಿ, ಉಸಿರಾಡದಂತೆ ಗಟ್ಟಿಯಾಗಿ ಹಿಡಿದಿದ್ದ. ಅಲ್ಲಿಗೆ ರಾಜಭಟರು ಬರಲು, "ಇವನ ವಿಷಯ ನಾನು ನೋಡಿಕೊಳ್ಳುತ್ತೇನೆ. ನೀವು ಹೋಗಿ

ಆ ಪೊದೆಯಹಿಂದೆ ಅವಿತಿಟ್ಟುಕೊಂಡಿರುವವರ ಸಂಗತಿನೋಡಿ" ಎಂದು ಹೇಳಿದ.

ಉತ್ಸಾಹದಿಂದ ರಾಜಭಟರು ಪೊದೆಯ ಹಿಂದೆ ಅವಿತಿಟ್ಟುಕೊಂಡಿರುವ ಕಳ್ಳರಮೇಲೆ ಧಾಳಿಮಾಡಲು ಹೋದರು. ಆದರೆ ಅಲ್ಲಿದ್ದ ಕಳ್ಳರು ಯಾರೂ ಕದಲಲಿಲ್ಲ. ಇವರಮೇಲೂ ಬೀಳಲಿಲ್ಲ. ತಪ್ಪಿಸಿಕೊಳ್ಳುವ ಪ್ರಯತ್ನವನ್ನಾದರೂ ಮಾಡಲಿಲ್ಲ. ರಾಜಭಟರು ಕೋಲುಗಳಿಂದ ಹೊಡೆದರೂಸಹ ತುಸವಾದರು ಕಿರಿಚಾಟ ಅರಚಾಟಗಳು ಕೇಳಿ ಬರಲಿಲ್ಲ. ಎಲ್ಲಿದ್ದವರು ಅಲ್ಲೇ ಇದ್ದರು. ಅವರಿಗೆ ಇದು ಬಹಳ ವಿಚಿತ್ರವಾಗಿ ತೋರಿತು. ಎಲ್ಲಾ ಬಟ್ಟೆಯ ಬೊಂಬೆಗಳಾಗಿದ್ದವು! ತಲೆಗೆ ಮಾತ್ರ ಭಾರಿ ಭಾರಿ ರುಮಾಲುಗಳನ್ನು ಸುತ್ತಿವೆ. ಕಳ್ಳರ ಯಜಮಾನನ ಬುದ್ಧಿವಂತಿಗೆಗೆ ಎಲ್ಲರೂ ಮೆಚ್ಚಿ ತಲೆದೂಗಿದರು.

ಯೋಗೀಶ್ವರನ ಆಶ್ರಮ ಇಲ್ಲಿಗೆ ಹತ್ತಿರದಲ್ಲೇ ಇದೆ. ಅಲ್ಲಿಗೆ ಹೋಗಿ ಇಂದು ರಾತ್ರಿ ಕಳೆಯೋಣ. ನಾಳೆ ಬೆಳಗ್ಗೆ ರಾಜಧಾನಿಗೆ ಹೋಗೋಣ ಎಂದು ಅವರು ಯೋಚಿಸಿದರು.

ಸರಿ, ಹಾಗೆಂದು ಅವರೆಲ್ಲ. ಆಶ್ರಮಕ್ಕೆ ಹೋದರು. ಆದರೆ ಅಲ್ಲಿ ಸ್ವಾಮಿಗಳಿರಲಿಲ್ಲ.

ದಂಡನಾಯಕನ ಆಜ್ಞೆಪ್ರಕಾರ ಭಟರು ಆಶ್ರಮವನ್ನೆಲ್ಲಾ ಶೋಧಿಸಿದರು. ಆಶ್ರಮದಲ್ಲಿ ವಿವಿಧ ಕಳ್ಳ ಮಾಲುಗಳು ರಾಶಿರಾಶಿಯಾಗಿ ಬಿದ್ದಿದ್ದುವು. ಅವುಗಳನ್ನೆಲ್ಲಾ ವಶಪಡಿಸಿಕೊಂಡರು. ತರುವಾಯ ಅವರಿಗೆ ನಿಗಿನಿಗಿ ಹೊಳೆಯುವ ಮೊಳದುದ್ದ ಕಪ್ಪಾದ ಗಡ್ಡ ನೇತುಹಾಕಿರುವುದು ಕಾಣಿಸಿತು. ಎಲ್ಲರೂ ಅವಾಕ್ಕಾಗಿ ಅದನ್ನು ನೋಡುತ್ತಿದ್ದರು.

ಆಗ ಕಳ್ಳರ ನಾಯಕನು "ಏನು ಹಾಗೆ ಬೆರಗಾಗಿ ನೋಡುತ್ತಿರುವಿರಿ? ಅದು ನನ್ನ ಹಗಲು ವೇಷ; ಆ ವೇಷದಲ್ಲಿ ನಾನು ಮೌನವ್ರತವನ್ನು ಆಚರಿಸುವಾಗ ನೀವು ನನಗೆ ಪೂಜೆಮಾಡಿ ಕಪ್ಪಕಾಣಿಕೆಗಳನ್ನು ಅರ್ಪಿಸುವಿರಿ. ಇದು ನನ್ನ ರಾತ್ರಿವೇಷ. ಈಗ ಈರೀತಿ ಪುರಸ್ಕಾರ ಮಾಡುತ್ತಿರುವಿರಿ! ನನ್ನ ಹೆಸರೇ ನಿಶೀಥಾನಂದಸ್ವಾಮಿ" ಎಂದು ವಿಲಕ್ಷಣವಾದ ನಗು ಬೀರಿದ. ಎಲ್ಲರೂ ಬೆರಗಾಗಿ ಸ್ವಲ್ಪ ಹೊತ್ತು ಬೊಂಬೆಗಳಂತೆ ನಿಂತುಬಿಟ್ಟರು.






# 5

[ಕುಂಡಲಿನೀ ರಾಜ್ಯದ ದಳಪತಿ ಭಂಡಾರ ತುಂಬಿಸಲಿಕ್ಕಾಗಿ ಪರದೇಶಕ್ಕೆ ಧಾಳಿ ಹೊರಟ. ಅಶುಭ ಸೂಚಕವಾಗಿ ಧೂಮಕೇತು ಕಾಣಿಸಿತು. ನಂತರ ತುಫಾನಿಗೆ ಸಿಕ್ಕಿ ಕೆಲವರನ್ನು ಕಳೆದುಕೊಂಡು ಕಡೆಗೊಂದು ದ್ವೀಪವನ್ನು ಸೇರಿದರು. ಅಲ್ಲಿ ಕ್ರೂರಮೃಗಗಳು, ಮಾಂತ್ರಿಕ ಏಕಾಕ್ಷಿ, ಚತುರ್ನೇತ್ರ ಇವರೊಂದಿಗೆ ಸಿಕ್ಕಿಬೀಳುವ ಭಯವಾಗಿ ಅಡಗಿದರು. ಹೀಗೆ—]

ಸಮರಸೇನನೂ, ಸೈನಿಕರೂ ಆ ರೀತಿ ಪೊದೆಗಳ ಹಿಂದೆ ಅವಿತುಕೊಂಡು ಎಲ್ಲವನ್ನೂ ನೋಡುತ್ತಲೇ ಇದ್ದರು. ಸರಸ್ಸಿನಲ್ಲಿ ಒಬ್ಬಾತ ನಿಂತಿರುವಂತೆ ಸ್ಪಷ್ಟವಾಗಿ ಕಾಣಿಸುತ್ತಿದೆ.

ಸೂಕ್ಷ್ಮವಾಗಿ ಪರಿಶೀಲಿಸಿ ನೋಡಿದರೆ ಆತನೊಂದು ಕುಚ್ಚಿರುವ ಟೋಪಿ ಧರಿಸಿರುವುದು ಕಾಣಿಸುತ್ತದೆ. ಆ ಟೋಪಿಯ ಮುಂಭಾಗದಲ್ಲಿ ಎರಡು ನೇತ್ರಗಳಂತಹ ಗುರುತು ಇವೆ. ಆ ಗುರುತುಗಳಿಂದ ಒಂದು ವಿಧವಾದ ಕಾಂತಿ ಹೊರಹೊಮ್ಮುತ್ತಿರುವುದು. ಸಮರಸೇನನು ಆ ಮನುಷ್ಯನು ಏಕಾಕ್ಷಿಯ ಕಡು ವೈರಿಯಾದ ಚತುರ್ನೇತ್ರನೆಂದು ತಿಳಿದುಕೊಂಡ. ಆ ವಿಸ್ಮಯಕರವಾದ ಪ್ರಾಣಿ—ಬ್ರಹ್ಮಾಂಡ ಶರೀರ, ಸಣ್ಣನೆಯ ತಲೆಯುಳ್ಳ ಮೃಗ—ಇವನನ್ನು ನುಂಗಲು ಯತ್ನಿಸಿದಾಗ ಇವನೆಂದುದೇನು? 'ಎಲೈ, ಈ ಚತುರ್ನೇತ್ರನನ್ನೇ ನುಂಗುವ ಉದ್ದೇಶವೇ ನಿನಗೆ?' ಎಂದನಷ್ಟೆ. ಅದರಿಂದಲೇ ಈತನು ಚತುರ್ನೇತ್ರನೆಂದು ಸಮರಸೇನನಿಗೆ ತಿಳಿಯಿತು.

ಆದರೆ 'ಇವನ ಕಣ್ಣಿಗೆ ಬೀಳದೆ ಈಗ ತಪ್ಪಿಸಿಕೊಳ್ಳುವುದು ಹೇಗೆ?' ಎಂದು ಸಮರಸೇನನು ಯೋಚಿಸುತ್ತಿದ್ದ.





ಎಂದು ಪ್ರಶ್ನೆಮಾಡಿದ. "ಹೌದು ಹೌದು" ಎಂದು ಒಂದೇ ಕೊರಳಿನಿಂದ ನುಡಿದರು ಎಲ್ಲಾ ಸೈನಿಕರು.

ಅವರಲ್ಲಿ ಒಬ್ಬನಿಗೆ ಅನುಮಾನ ಉಂಟಾಯಿತು. "ಸೇನಾಧಿಪತಿಯೇ, ಅನ್ಯಥಾ ಭಾವಿಸದಿದ್ದರೆ ನಿಮ್ಮನ್ನೊಂದು ಮಾತು ಕೇಳಬೇಕೆಂದಿರುವೆನು" ಎಂದ.

"ಆಹಾ, ಅಭ್ಯಂತರವಿಲ್ಲದೆ ಕೇಳಬಹುದು. ಇಂತಹ ಸಂಕಟ ಸಮಯದಲ್ಲಿ ಒಬ್ಬನ ಮಾತಿನಮೇಲೆ ಆಧಾರ. ಪಡುವುದಕ್ಕಿಂತಲೂ ನಾಲ್ಕುಜನ ಸೇರಿ ಆಲೋಚಿಸಿ ಒಂದು ನಿರ್ಧಾರಕ್ಕೆ ಬರುವುದು ಶ್ರೇಯಸ್ಕರ ನೀನು ಕೇಳುವುದನ್ನು ನಿಃಸಂಶಯವಾಗಿ ಕೇಳು" ಎಂದು ಪ್ರೋತ್ಸಾಹಿಸಿದ ಸಮರಸೇನ.

ಆಗ ಸೈನಿಕನು "ಸೇನಾನಿಯೇ, ಚತುರ್ನೇತ್ರನಿಗೂ ಏಕಾಕ್ಷಿಮಾಂತ್ರಿಕನಿಗೂ ಇರುವ ದ್ವೇಷವನ್ನು ನಮಗೆ ಅನುಕೂಲವಾಗುವಂತೆ ಮಾಡಿಕೊಳ್ಳಬೇಕೆಂದು ನಿಮ್ಮ ಅಭಿಪ್ರಾಯವಿರಬಹುದು. ಆದರೆ ನನ್ನದೊಂದು ಮಾತು. ಸಿಂಹಕ್ಕೂ, ಹುಲಿಗೂ ಸದಾ ಹಗೆತನ. ಆದರೆ ಅವೆರಡೂ ಕ್ರೂರಮೃಗಗಳೇ ಎಂಬ ವಿಷಯಮಾತ್ರ ನಾವು ಮರೆಯಬಾರದು" ಎಂದು ವಿಜ್ಞಾಪಿಸಿಕೊಂಡ.

ಸಮರಸೇನ ಮತ್ತೆ ಯೋಚನೆಯಲ್ಲಿ ಬಿದ್ದ. "ನಿನ್ನಮಾತು ನಿಜವೇ" ಎಂದು ನಿಟ್ಟುಸಿರನ್ನು ಬಿಟ್ಟು, "ಇವರು ಮಾಯಾವಿಗಳು. ದುಷ್ಟಶಕ್ತಿಗಳನ್ನು ತಮ್ಮ ಹದ್ದುಬಸ್ತಿನಲ್ಲಿಟ್ಟು

ಹಾಗೆ ಆತನು ಆಲೋಚನಾಮಗ್ನನಾಗಿರುವಾಗ ಸೈನಿಕನೊಬ್ಬನು "ಸೇನಾನಿಯೇ ನವುಗಿರುವಂತೆ ಎರಡು ಕಣ್ಣುಗಳಿಗೆ ಬದಲಾಗಿ ಇವನಿಗೆ ನಾಲ್ಕು ಕಣ್ಣುಗಳಿರುವಂತಿದೆಯಲ್ಲಾ" ಎಂದ.

ಆಗ ಮತ್ತೊಬ್ಬ ಸೈನಿಕನು "ಇರುವಂತಿದೆಯೇನು? ನಿನ್ನತಲೆ. ಇದ್ದೇ ಇದೆ. ಸ್ಪಷ್ಟವಾಗಿ ಕಾಣುತ್ತಿಲ್ಲವೆ? ಇನ್ನೂ ಇದರಲ್ಲಿ ಸಂಶಯವೇನು ಬಂತು?" ಎಂದು ಮೂದಲಿಸಿದನು.

ಇದೆಲ್ಲವನ್ನೂ ಸಮರಸೇನನು ಕೇಳುತ್ತಲೇ ಇದ್ದ. ಮತ್ತೊಂದು ಕಡೆ ಆತನ ಆಲೋಚನೆ ನಿರಾತಂಕವಾಗಿ ಸಾಗುತ್ತಲೇ ಇತ್ತು. ಆತನು ತನ್ನ ಸೈನಿಕರನ್ನು ಕುರಿತು "ಈ ಚತುರ್ನೇತ್ರನೂ ಏಕಾಕ್ಷಿಯೂ ಶತ್ರುಗಳಲ್ಲವೆ?"





ಕೊಂಡಿರುವ ವ್ಯಕ್ತಿಗಳು. ಅವರಿಬ್ಬರ ಮಧ್ಯೆ ವಿರೋಧವೇಕೋ ನಮಗೆ ತಿಳಿಯದು. ಧನರಾಶಿಯಿಂದ ತುಂಬಿದ ಆ ಹಡಗು, ಆ ಹಡಗನ್ನು ರಕ್ಷಿಸುತ್ತಿರುವ ಆ ನಾಗಕನ್ಯೆ, ಇವುಗಳ ರಹಸ್ಯ ನಮಗೆ ತಿಳಿಯದು. ಅಲ್ಲ, ಈ ಭಯಂಕರ ದ್ವೀಪದಲ್ಲಿರುವವರಿಗೆ ಹಣದಿಂದ ಏನು ಅಗತ್ಯವೋ ನನಗಂತೂ ಅರ್ಥವಾಗುತ್ತಿಲ್ಲ" ಎಂದು ಹೇಳುತ್ತಿರುವಂತೆಯೇ, ಸರಸ್ಸಿನಿಂದ ಚತುರ್ನೇತ್ರನು ದಡದಮೇಲಕ್ಕೆ ಬಂದುಬಿಟ್ಟನು.

ನಾಲ್ಕು ಹೆಜ್ಜೆ ಮುಂದಿಟ್ಟು, ಸಮರಸೇನ ಮತ್ತು ಸೈನಿಕರು ಬಚ್ಚಿಟ್ಟುಕೊಂಡಿರುವ ಪೊದೆಯ ಕಡೆ ನೋಡುತ್ತಾ "ಎಲೆ, ಅಣ್ಣಗಳಿರಾ, ಬನ್ನಿ ಹೊರಗೆ ಬನ್ನಿ. ಅಲ್ಲಿಯೇಕೆ ಅಡಗಿದ್ದೀರಿ?" ಎಂದು ಪಕಪಕ ನಕ್ಕನು.

ಸಮರಸೇನನೂ, ಆತನ ಅನುಯಾಯಿಗಳೂ ಭಯದಿಂದ ತತ್ತರಿಸಿದರು. ಓಡಿ ಹೋಗಲು ಹವಣಿಸಿದರು. ಕಾಲೇ ಬರಲಿಲ್ಲ. ಎರಡು ಹೆಜ್ಜೆ ಯಿಡುವಷ್ಟರಲ್ಲಿ ಚತುರ್ನೇತ್ರನ ಕಂಠಸ್ವರ ಮತ್ತೆ ಕೇಳಿಸಿತು.

"ಎಲೈ, ಹುಚ್ಚರೇ, ನನ್ನ ಕಣ್ಣಿಗೆ ಮಣ್ಣೆರಚುವ ಹಂಚಿಕೆಯೋ? ಈ ಮರಗಿಡಗಳು ಬೆಟ್ಟಗುಡ್ಡಗಳು, ಯಾವುದೂ ನನ್ನ ದೃಷ್ಟಿಗೆ ಅಡ್ಡಬರಲಾರವು. ಯಾವುದನ್ನಾದರೂ ಭೇದಿಸಿಕೊಂಡು ಹೋಗುವ ಶಕ್ತಿ ನನ್ನ ನೋಟಕ್ಕೆ ಇದೆ. ಈ ದ್ವೀಪದಲ್ಲಿ, ಯಾವ ಮೂಲೆಯಲ್ಲಿ, ಏನು ನಡೆಯುತ್ತಿರು





ವುದೋ ಯಾವಾಗ ಬೇಕಾದರೂ ಹೇಳ ಬಲ್ಲೆ....ಇರಿ....ಉಲೂಕಾ, ನರವಾನರಾ" ಎಂದು ಕೂಗಿದ.

ಆ ಕೂಗನ್ನು ಕೇಳಿ ಕಪ್ಪುಗೂಬೆ ಮತ್ತು ನರವಾನರನು ಓಡುತ್ತಾ ಬಂದು ಸಮರ ಸೇನನ ಹಾದಿಗೆ ಅಡ್ಡವಾಗಿ ನಿಂತುಕೊಂಡವು. ನರವಾನರನು ಕೈಯಲ್ಲಿ ಒಂದು ಮರದ ಕೊಂಬೆಯನ್ನು ಝುಳಿಪಿಸುತ್ತಿದ್ದ. ಕರಿಗೂಬೆ ಹಾರುತ್ತಾ ಕರ್ಕಶವಾಗಿ ಕೂಗಾಡ ತೊಡಗಿತು.

ಪರಿಸ್ಥಿತಿ ಎಲ್ಲಾ ಚೆನ್ನಾಗಿ ಅರ್ಥವಾಯಿತು. ತಾವು ಸಹಾಯಹೀನರಾಗಿರುವೆವು ಎಂದು ಅರಿವಾಯಿತು. ತಮ್ಮ ಹತ್ತಿರವಿರುವ ಕತ್ತಿ ಬಾಣಗಳು ಈಗ ಏನೂ ಕೆಲಸಕ್ಕೆ ಬಾರವು.



ಸೈನಿಕರಲ್ಲಿ ಉಂಟಾಗಿರುವ ಭೀತಿಯನ್ನು ತೊಲಗಿಸುವ ಆಶಯದಿಂದ ಸಮರಸೇನನು "ನಮ್ಮ ದೇವಿ ಯಿರುವಾಗ ನಮಗೇತರ ಭಯ. ನಾವೆಲ್ಲಾ ಆ ಕುಂಡಲಿನೀದೇವಿಯ ಮರೆ ಹೋಗೋಣ" ಎಂದ.

ಸೈನಿಕರು ಗರಬಡಿದಂತೆ ನಿಂತಿದ್ದರು. ಚತುರ್ನೇತ್ರನು ಮೆಲ್ಲನೆ ಅಡಿಯಿಡುತ್ತಾ ಅವ ರನ್ನು ಸಮೀಪಿಸಿದ.

ಎಲ್ಲರೂ ಗಡಗಡ ನಡುಗುತ್ತಿರಲು ಅವನು? ತುಂಬಾ ಮೃದುವಾದ ಕಂಠಸ್ವರದಲ್ಲಿ "ಅಯ್ಯಾ, ಯಾರು ನೀವು? ಈ ದ್ವೀಪಕ್ಕೆ ಏತಕ್ಕಾಗಿ ಬಂದಿರಿ?" ಎಂದು ಕೇಳಿದ.

ಆತನ ಮುಖದಲ್ಲಿ ಈರ್ಷ್ಯೆಯ ಅಥವಾ ಕ್ರೌರ್ಯದ ಛಾಯೆ ತುಸವಾದರೂ ಕಾಣಿಸ ಲಿಲ್ಲ. ಆತನು ಶಾಂತಮೂರ್ತಿಯಂತೆ ಕಂಡು ಬಂದ. ಆಶ್ಚರ್ಯವಾಯಿತು ಎಲ್ಲರಿಗೂ.

ಚತುರ್ನೇತ್ರನು ಆರೀತಿ ಆಪ್ಯಾಯಮಾನ ವಾಗಿ ಕೇಳಲು ಅವರಿಗೆ ಕೊಂಚ ಧೈರ್ಯ ಬಂತು. ಸ್ವಲ್ಪ ಸ್ತಿಮಿತಕ್ಕೆ ಬಂದರು. ಆದರೆ ಸಮಜಾಯಿಸಿ ಹೇಳಲೋ ಬೇಡವೋ ಎಂಬ ಸಂಶಯಕ್ಕೆ ಒಳಗಾದ ಸಮರಸೇನ. ಸಮಾ ಧಾನ ಹೇಳುವುದೇ ಯುಕ್ತವೆಂದು ಅವನಿಗೆ ತೋರಿತು. ತಮ್ಮದು ಅವನಿಂದ ಮುಚ್ಚಿಡ ಬೇಕಾದ ನಿಗೂಢ ವಿಷಯವೇನೂ ಇಲ್ಲ ವೆಂಬಂತೆ ಯೋಚಿಸಿಕೊಂಡ.

'ನಮ್ಮದು ಕುಂಡಲಿನೀ ದೇಶ, ಸಮುದ್ರ ಪ್ರಯಾಣ ಮಾಡುತ್ತ ಬಿರುಗಾಳಿಗೆ ಸಿಕ್ಕಿ



ಇಲ್ಲಿಗೆ ಬಂದೆವು ; ಎಂದ ಸಮರಸೇನ. ಕೇಳಿ ಚತುರ್ನೇತ್ರನು ಮುಗುಳುನಕ್ಕು 'ಅಣ್ಣಾ, ನೀನು ಹೇಳಿದುದರಲ್ಲಿ ಸ್ವಲ್ಪ ಸತ್ಯವಡಗಿದೆ. ಆದರೆ ನೀನು ಈ ಸಮುದ್ರಪ್ರಯಾಣ ಕೈಗೊಂಡಿರುವ ಕಾರಣ ಮುಚ್ಚಿಡಲು ಪ್ರಯತ್ನಿಸುತ್ತಿರುವೆ' ಎಂದ.

ಆಗ ಸಮರಸೇನನು ಮುಚ್ಚುಮರೆಯಿಲ್ಲದೆ ತಮ್ಮ ಪ್ರಯಾಣದ ಕಾರಣವನ್ನು ವಿವರಿಸಿ ಹೇಳಿದ. ತಮ್ಮ ಪ್ರಭುಗಳ ಖಜಾನೆ ಖಾಲಿಯಾಗಲು, ಅದನ್ನು ಭರ್ತಿಮಾಡಬೋಸುಗ ಬೇರೆ ಉಪಾಯವಿಲ್ಲದೆ ಈ ಪ್ರಯಾಣ ಕೈಗೊಳ್ಳಬೇಕಾಯಿತೆಂದು ಹೇಳಿದ.

ಎಲ್ಲವನ್ನೂ ಶಾಂತಚಿತ್ತದಿಂದ ಕೇಳಿ ಚತುರ್ನೇತ್ರನು "ಅಹ್ಹಹ್ಹ, ಧನಕ್ಕಾಗಿ ಹೊರಟು, ದುರದೃಷ್ಟವಶಾತ್ ಈ ಮಾಯಾದ್ವೀಪವನ್ನು ಸೇರಿಕೊಂಡಿರೆಂದಾಯಿತು. ಸರಿ ಇಲ್ಲೊಬ್ಬ ಮಾಂತ್ರಿಕನಿದ್ದಾನೆ. ಅವನಿಗೂ ಹಣದಾಶೆ ಹೆಚ್ಚು. ಧನಾಶೆಯುಳ್ಳ ನೀವಿಬ್ಬರೂ ಒಟ್ಟುಗೂಡಿದರೆ...." ಎಂದು ಅದೊಂದು ಬಗೆಯಾಗಿ ನಕ್ಕ.

ಏನು ಹೇಳಲೂ ಸಮರಸೇನನಿಗೆ ತಿಳಿಯದಾಯಿತು. ಆತನು ಈ ಸಂದಿಗ್ಧಪರಿಸ್ಥಿತಿಯಲ್ಲಿರುವಾಗ ಆ ಪ್ರದೇಶವೆಲ್ಲಾ ಪ್ರತಿಧ್ವನಿಸುವಂತೆ ಒಂದು ಕಂಠಸ್ವರ ಕೇಳಿಸಿತು. ಅದು ಮಾಂತ್ರಿಕ ಏಕಾಕ್ಷಿಯ ಗಂಟಲು. "ಹೇಯ್, ಕಾಲಭುಜಂಗಾ, ಕಂಕಾಳ, ಬನ್ನಿ ಬನ್ನಿ, ಹುಡುಕಾಡಿ..." ಎಂದು ಕೂಗುತಿದ್ದ.



ಭಯದಿಂದ ನಡುಗುತ್ತಿದ್ದ ಸೈನಿಕರಿಗೆ ಸಮರಸೇನನು ಧೈರ್ಯ ಹೇಳುತ್ತಾ "ಅದೋ, ಅಲ್ಲಿ ಕಾಣುವ ಪೊದೆಯಲ್ಲಿ ತಲೆಮರೆಸಿಕೊಳ್ಳಿ. ಅವನೇ ಏಕಾಕ್ಷಿ. ಏಕಾಕ್ಷಿ..." ಎಂದು ಎಚ್ಚರಿಸಿದ. ಅವರೆಲ್ಲಾ ಗಬಗಬನೆ ಅಲ್ಲಿಗೆ ಹೋಗಿ ಬಚ್ಚಿಟ್ಟುಕೊಂಡರು.

ಅವರು ಹಾಗೆ ಮರೆಯಾದರೋ ಇಲ್ಲವೋ ಕೂಡಲೇ ಏಕಾಕ್ಷಿಅಲ್ಲಿಗೆ ಸಾಕ್ಷಾತ್ಕರಮಾಡಿದ. ಕಾಲಸರ್ಪ ಮತ್ತು ತಲೆಬುರುಡೆ ಅವನ ಪಕ್ಕದಲ್ಲೇ ಬೆಂಬಿಡದೆ ಕದಲಾಡುತ್ತಿವೆ.

ಚತುರ್ನೇತ್ರನು ಕಣ್ಣಿಗೆ ಬಿದ್ದ ಕೂಡಲೇ ಏಕಾಕ್ಷಿ ಮಾಂತ್ರಿಕನು ಪ್ರಳಯ ಕರ್ಕಶವಾಗಿ ನಕ್ಕು, "ಎಷ್ಟು ದಿನಕ್ಕೆ ಕಾಣಿಸಿದಿರಿ, ಚತುರ್ನೇತ್ರರೇ, ಎಷ್ಟು ದಿನಗಳಿಗೆ ಸಿಕ್ಕಿದಿರಿ"



ಎಂದೆನ್ನುತ್ತಾ ಸರ್ರನೆ ತನ್ನ ಒರೆಯಿಂದಕತ್ತಿ ಎಳೆದ. ಆದರೆ ಚತುರ್ನೇತ್ರನು ಅಂಜಲಿಲ್ಲ, ಅಳುಕಲಿಲ್ಲ; ದಿಟ್ಟತನದಿಂದ ತನ್ನ ಸ್ಥಳದಲ್ಲೇ ನಿಂತಿದ್ದ. "ಓಹೋ, ಏಕಾಕ್ಷಿ ಮಹಾಶಯರೇ, ದಯಮಾಡಿಸೋಣವಾಗಲಿ. ದಯಮಾಡಿಸೋಣವಾಗಲಿ" ಎಂದು ಪರಿಹಾಸ ಮಾಡಿದ.

ಕೂಡಲೇ ನರವಾನರ, ಉಲೂಕ ಎಂದು ಕೂಗಲು ಕಾರ್ಗತ್ತಲೆಯಲ್ಲಿ ಕಪ್ಪುಗೂಬೆ ಮತ್ತು ನರವಾನರರು ಅಲ್ಲಿಗೆ ಬಂದು ವಾಲಿದವು. ಅವುಗಳನ್ನು ಕಂಡು ಏಕಾಕ್ಷಿ ಮಾಂತ್ರಿಕನು ತತ್ತರಿಸಿ ತಬ್ಬಿಬ್ಬಾದ.

ಅದನ್ನು ಗ್ರಹಿಸಿದ ಚತುರ್ನೇತ್ರನು "ಉಲೂಕ, ಬಲಗಣ್ಣಿನ ವಿಚಾರ ಆಗಲೇ ನಿನಗೆ ತಿಳಿದಿದೆ. ಉಳಿದ ಆ ಎಡಗಣ್ಣನ್ನೂ ಸಹ ರುಚಿ ನೋಡು ನಡೆ" ಎಂದು ಅವನನ್ನು ಹುರಿದುಂಬಿಸಿದ.

ತಕ್ಷಣವೇ ಗೂಬೆ ಏಕಾಕ್ಷಿಯ ಮೇಲೆ ಹಾರಿತು. ಅತನು ಕಂಗಾರುಪಡುತ್ತಾ "ಕಂಕಾಳಾ ಓಯ್, ಕಂಕಾಳಾ" ಎಂದು ಕೂಗಿದ. ಕೂಡಲೇ ತಲೆಬುರುಡೆ ತನ್ನ ಬೋಳು ಬಾಯಿಯನ್ನು ಕದಲಾಡಿಸುತ್ತಾ ಮುಂದಕ್ಕೆ ಬಂದು ಗೂಬೆಯ ಮೇಲೆ ಬಿತ್ತು.

"ಆಹ್ಹಹ್ಹಾ" ಎಂದು ನಕ್ಕ ಏಕಾಕ್ಷಿ. ಚತುರ್ನೇತ್ರನು ಉಗ್ರಸ್ವರೂಪಿಯಾದ. 'ನರವಾನರ' ಎಂದು ಅತನು ಕೂಗಲು, ಮರು ನಿಮಿಷವೇ ನರವಾನರ ಏಕಾಕ್ಷಿ ಮಾಂತ್ರಿಕನ




ಮೇಲೆ ಬಿದ್ದ. ತಕ್ಷಣ ಮಾಂತ್ರಿಕನು "ಕಾಲಭುಜಂಗಾ" ಎಂದು ಕೂಗಿದ. ಕೂಡಲೇ ಆ ಕಾಲಸರ್ಪವು ಭಯಂಕರವಾದ ಸುಳಿಗಳೊಂದಿಗೆ ಮುಂದಕ್ಕೆ ಬಂದು ನರವಾನರನನ್ನು ಸುತ್ತಿಕೊಂಡಿತು.

ಪೊದೆಯ ಮರೆಯಲ್ಲಿದ್ದು ಈ ಹೋರಾಟವನ್ನು ಈಕ್ಷಿಸುತ್ತಿದ್ದರು, ಸಮರಸೇನ ಮತ್ತು ಅನುಯಾಯಿಗಳು. 'ಸರಿಸಮಾನವಾದ ಜೋಡಿಗಳಾಗಿವೆ' ಎಂದ ಬಬ್ಬ ಸೈನಿಕ. "ಆದುದರಿಂದಲೇ ನಾವು ಉಳಿದೆವು" ಎಂದ ಸಮರಸೇನ.

ಏಕಾಕ್ಷಿ ಮಾಂತ್ರಿಕನ ಭೃತ್ಯರಿಗೂ, ಚತುರ್ನೇತ್ರನ ಗೂಢಚಾರರಿಗೂ ಭೀಕರ ಕದನವಾಯಿತು. ಕರಿಗೂಬೆಯನ್ನು ತಲೆಬುರುಡೆ



ತನ್ನ ಬೋಳು ಬಾಯಿಂದ ಹಿಡಿಯಲೆತ್ನಿಸು ತಿತ್ತು. ನರವಾನರನನ್ನು ಹಿಡಿದು ಕೊಲ್ಲಬೇಕೆಂದು ಕಾಲಭುಜಂಗನು ಬಲು ರಭಸದಿಂದ ಹೆಣಗಾಡುತಿತ್ತು. ಪರಿಣಾಮುವೇನಾಗುವುದೊ ಎಂದು ಸಮರ ಸೇನಾದಿಗಳು ರೆಪ್ಪೆ ಬಡಿಯದೆ ನೋಡುತ್ತಿದ್ದರು.

ಚತುರ್ನೇತ್ರನೂ ಮತ್ತು ಏಕಾಕ್ಷಿಯೂ ಒಬ್ಬರನ್ನೊಬ್ಬರು ದುರುಗುಟ್ಟಿಕೊಂಡು ನೋಡಿದರು. ಈ ಹೊಡೆದಾಟ ಇಷ್ಟಕ್ಕೇ ಮುಕ್ತಾಯವಾಗುವುದಿಲ್ಲವೆಂದು ಇಬ್ಬರಿಗೂ ತಿಳಿಯಿತು.

ಒಂದು ಸಾರಿ ಚತುರ್ನೇತ್ರನು ನಕ್ಕು ತಲೆಯಮೇಲಿದ್ದ ಟೋಪಿಯನ್ನು ಮೇಲಕ್ಕೆ ಎತ್ತಿ ಏರುಧ್ವನಿಯಲ್ಲಿ 'ಓಂ, ಹ್ರೀಂ' ಎಂದ. ಕೂಡಲೇ ಆತನು ಅದೃಶ್ಯನಾದ. ಗೂಬೆ ಮತ್ತು ನರವಾನರ ಸಹ ಮಾಯವಾದವು.

ಏಕಾಕ್ಷಿಮಾಂತ್ರಿಕನು ಗಂಭೀರವಾಗಿ ನಕ್ಕು "ಅದೃಶ್ಯವಾದೆಯಾ? ಇರಲಿ, ಎಷ್ಟು ದಿನ ತಪ್ಪಿಸಿಕೊಂಡು ತಿರುಗುವೆಯೋ ನೋಡಿಯೇಬಿಡುತ್ತೇನೆ ಎಂದಾದರೂ ನನ್ನ ಕೈಗೆ ಸಿಗಲೇಬೇಕು ನೀನು" ಎಂದು ಹೂಂಕರಿಸಿದ. ತಲೆ ಬುರುಡೆ ಮತ್ತು ಕಾಲಸರ್ಪವನ್ನೂ ಕರೆದುಕೊಂಡು ಅಲ್ಲಿಂದ ಮಾಯವಾದ. ಯುದ್ಧರಂಗವು ಖಾಲಿ ಆಯಿತು.

'ಬದುಕಿದೆವಪ್ಪಾ ದೇವರೇ" ಎಂದು ಸಮರಸೇನನೂ, ಸೈನಿಕರೂ ಹೊರಗೆ ಬಂದರು. ಇನ್ನು ಹೇಗಾದರೂ ಮಾಡಿ ಪೂರ್ವತೀರದಲ್ಲಿರುವ ತಮ್ಮ ಹಡಗುಗಳ ಹತ್ತಿರ ಹೋಗಲು ಅವರು ಲಗುಬಗನೆ ಹೆಜ್ಜೆಯಿಟ್ಟರು. ಒಂದು ಹತ್ತು ಹೆಜ್ಜೆಯಿಟ್ಟರೋ ಇಲ್ಲವೋ ಭೂಮಿ ಫಳಫಳನೆಂದು ಬಿರುಕು ಬಿಡುವ ಅದ್ಭುತ ಶಬ್ದ ಕೇಳಿಸಿತು.

ಮುಂದುಗಡೆ ಮಹಾಪರ್ವತದಿಂದ ಉಗುಳುತ್ತಿದ್ದ ಅಗ್ನಿಜ್ವಾಲೆಗಳು ಗಗನವನ್ನು ಮುಟ್ಟುತ್ತಿದ್ದವು. ಇದನ್ನು ನೋಡಿ ಸಮರಸೇನನಿಗೂ, ಸೈನಿಕರಿಗೂ ಎದೆಗುಂಡಿಗೆ ಹೊಡೆದುಕೊಳ್ಳಲಾರಂಭಿಸಿತು. ದಿಗ್ಭ್ರಾಂತರಾಗಿ ನಿಂತರು. (ಇನ್ನೂ ಇದೆ)








# ವಿಕವಿಕನ - - - - ಅವಾಂತರ

**ಪೂ**ರ್ವಕಾಲದಲ್ಲಿ ಪವನಪುರವೆಂಬ ಪಟ್ಟಣಕ್ಕೆ ಪ್ರಜೋತ್ಸನು ರಾಜನಾಗಿದ್ದನು. ಆತನು ತನ್ನ ಆಸ್ಥಾನದಲ್ಲಿ ಉದ್ಧಾಮ ಪಂಡಿತರನ್ನೂ, ಮಹಾ ಕವಿಗಳನ್ನೂ, ಗಾಯಕರನ್ನೂ ಪೋಷಿಸುತ್ತಿದ್ದನು. ಚತುರ ಸಂಭಾಷಣೆ, ಹಾಸ್ಯ ಪ್ರಸಂಗಗಳೆಂದರೆ ಆತನಿಗೆ ಅಮಿತ ಆಸಕ್ತಿ. ಕಿವಿ ಜೋಲುಬಿಟ್ಟು ಭಾಗ ವಹಿಸುವಷ್ಟು ಮಹದಾಶೆ.

ಈ ರಾಜನ ಆಸ್ಥಾನದಲ್ಲಿ ವಿಕವಿಕನೆಂಬ ಹಾಸ್ಯಗಾರನಿದ್ದ. ಅವನ ಹಾಸ್ಯಗಳಿಗೆ ರಾಜ ತುಂಬಾ ಮೆಚ್ಚಿದ್ದ ವಿಕವಿಕನೆಂದರೆ ರಾಜನಿಗೆ ಪಂಚಪ್ರಾಣವಾಗಿತ್ತು.

ವಿಕವಿಕನು ಸಾಮಾನ್ಯನಲ್ಲ. ಚಿತ್ರ ವಿಚಿತ್ರವಾದ ಕತೆಗಳನ್ನು ಕಲ್ಪಿಸಿ ಹೇಳಿ ನಗಿಸುತ್ತಿದ್ದ. ವಿಕವಿಕ ವಿದೂಷಕನು ಬಾಯಿಬಿಡದಿದ್ದರೂ ಸಹ ಎಲ್ಲರೂ ನಗುವರು. ಗೂನು ಬೆನ್ನಿನ ವಿಕವಿಕನು ಓರೆಕೋರೆಯಾಗಿ ಕಾಲು ಹಾಕಿದರೆ ಸಾಕು, ನೋಡುವವರೆಲ್ಲರೂ ಕಿಲಕಿಲ ನಗುವರು. ರಾಜನಿಗೆ ಬೇಕಾದವನೆಂದು ಆ ನಕಲಿಯವನನ್ನು ಕಂಡರೆ ಪ್ರತಿಯೊಬ್ಬರೂ ಹೆಚ್ಚು ಗೌರವಮರ್ಯಾದೆಗಳನ್ನು ವ್ಯಕ್ತಪಡಿಸುವರು.

ಮಹಾರಾಜರ ಅನುಗ್ರಹವನ್ನು ಸಂಪಾದಿಸಬೇಕೆಂದರೆ ಮೊದಲು ವಿಕವಿಕನ ಆಶ್ರಯ ಹೊಂದಬೇಕಾಗಿತ್ತು. ವಿಕವಿಕನಿಗೆ ಸದಭಿಪ್ರಾಯವನ್ನುಂಟು ಮಾಡುವುದು ಪ್ರಯಾಸಕರವಾದ ವಿಷಯವಲ್ಲ. ಅವನು ಭೋಜನಪ್ರಿಯ; ಹೊಟ್ಟೆಬಾಕ. ಒಳ್ಳೇ ಭರ್ಜರಿ ಊಟವಿಟ್ಟು ಸತ್ಕರಿಸಿದರೆ ರಾಜನ ಬಳಿಯಲ್ಲಿ ಯಾವ ಕೆಲಸವನ್ನಾದರೂ ಸುಲಭವಾಗಿ ಸಾಧಿಸ ಬಹುದಾಗಿತ್ತು.

ಒಂದಾವರ್ತಿ ಆಸ್ಥಾನದಲ್ಲಿ ಕೆಲಸಕ್ಕಾಗಿ ಪ್ರಯತ್ನಿಸುತ್ತಿದ್ದ ಒಬ್ಬ ಯುವಕನು ವಿಕವಿಕನನ್ನು ಔತಣಕ್ಕೆ ಕರೆದನು. ಹೆಚ್ಚು ಗಟ್ಟಲೆ ಊಟವೆಂದು ನಕಲಿಯವನು ಹಗಲೆಲ್ಲಾ ಉಪವಾಸ ವಿದ್ದು ರಾತ್ರಿಯಲ್ಲಿ ಒಳ್ಳೆಯ ಹಸಿವೆಯಿಂದ ಔತಣಕ್ಕೆಂದು ಹೊರಟ.

ಅಲ್ಲಿ ಅಡಿಗೆಮಾಡಿದ್ದ ಅಪರೂಪವಾದ ಜಂತುಗಳ ಮಾಂಸವನ್ನು ಬಡಿಸಿದ್ದರು.

ಎಂ. ಮಹಾಬಲಶೆಟ್ಟಿ





ಆಶೆಯಿಂದ ಗಬಗಬನೆ ಪದಾರ್ಥಗಳನ್ನು ಮುಕ್ಕುತ್ತಿರುವಾಗ ವಿಕವಿಕನ ಗಂಟಲಲ್ಲಿ ಚಿಕ್ಕ ಮೂಳೆಯೊಂದು ಸಿಕ್ಕಿಕೊಂಡಿತು. ತೇಲುಗಣ್ಣು ಹಾಕಿ ಮಿಡಕತೊಡಗಿದ.

ಇದನ್ನು ಕಂಡು ಯುವಕನು ತರತರನೆ ನಡುಗಿದ. ತನ್ನ ಆಪ್ತ ಸ್ನೇಹಿತನಿಗೆ ಇಂತಹ ಪ್ರಮಾದ ಪ್ರಾಪ್ತವಾಯಿತೆಂದು ಕೇಳಿದರೆ ರಾಜ ತಲೆ ಹಾರಿಸಿಬಿಡುತ್ತಾನೆಂದು ತುಂಬಾ ಭೀತಿಗೊಂಡನು.

ಮಾತು ಬಾರದ ವಿಕವಿಕನನ್ನು ಮೆಲ್ಲನೆ ಸಾಗಿಸಿಕೊಂಡು ಹತ್ತಿರದಲ್ಲಿದ್ದ ಒಬ್ಬ ಡಾಕ್ಟರ ಮನೆಗೆ ಆ ಯುವಕ ಹೋದ. ಬಾಗಿಲು ಹಾಕಿತ್ತು. ವಿಕವಿಕನನ್ನು ಮುಚ್ಚಿದ್ದ ಬಾಗಿಲಿಗೆ ಒರಗಿಸಿ ನಿಲ್ಲಿಸಿ "ವೈದ್ಯರಾಜರೇ, ಪ್ರಾಣ ಹೋಗುವಂತಿದೆ" ಎಂದು ಕೂಗಿಕೊಂಡ ಯುವಕ. ಇದನ್ನು ಕೇಳಿದ ವೈದ್ಯನು ಆತುರವಾಗಿ ಬಂದು ಬಾಗಿಲು ತೆಗೆದ. ಬಾಗಿಲು ತೆರೆಯುವ ವೇಳೆಗೆ ಯುವಕನು ಅಲ್ಲಿಂದ ಜಾರಿಕೊಂಡ. ಕದಕ್ಕೆ ಒರಗಿದ್ದ ವಿಕವಿಕನು ಬಾಗಿಲು ತೆರೆದಾಕ್ಷಣ ಧಡಾರನೆ ಒಳಗಡೆಗೆ ಬಿದ್ದುಬಿಟ್ಟನು.

ವೈದ್ಯನ ಎದೆ ಝುಲ್ಲೆಂದಿತು. ತನ್ನ ಅಜಾಗರೂಕತೆಯಿಂದ ಬಾಗಿಲ ಪಕ್ಕದಲ್ಲಿದ್ದ ರೋಗಿ ಬಿದ್ದನೆಂದು ಭಾವಿಸಿದ. ಕೈ ಹಿಡಿದು ನೋಡಲು ನಾಡಿ ಸಿಗಲಿಲ್ಲ. ದೀಪ ತಂದು ನೋಡಿದರೆ ಬಿದ್ದಾತನು ಆಸ್ಥಾನದ ವಿದೂಷಕ! ಇನ್ನೇನಿದೆ! ತನಗೆ ಮರಣಶಿಕ್ಷೆ ತಪ್ಪುವುದಿಲ್ಲವೆಂದು ಭಾವಿಸಿದ.

ಸುಮ್ಮನೆ ಕಾಲಕಳೆಯುವುದು ಸರಿಯಲ್ಲವೆಂದು, ವೈದ್ಯನು ವಿಕವಿಕನನ್ನು ಭುಜದ ಮೇಲೆ ಹಾಕಿಕೊಂಡು ನೆರೆಮನೆಯಾತನ ಹಿತ್ತಲು ಗೋಡೆಯ ಮೇಲೇರಿ ಒಂದು ತರಕಾರಿ ತೋಟದಲ್ಲಿ ಗೋಡೆಗೆ ಒರಗಿಸಿ ನಿಲ್ಲಿಸಿಟ್ಟು ತಾನು ಮೆಲ್ಲನೆ ಜಾರಿಕೊಂಡ. ಆ ಮನೆ ಒಬ್ಬ ವರ್ತಕನಿಗೆ ಸೇರಿತ್ತು.

ಆಗಿನ ಕಾಲದಲ್ಲಿ ಕಳ್ಳರಕಾಟ ಪ್ರಬಲವಾಗಿತ್ತು. ಆ ಮನೆಯ ವರ್ತಕನು ರಾತ್ರಿಯಲ್ಲಿ ಕಾವಲು ಕಾಯುತ್ತಿದ್ದ. ದೊಣ್ಣೆಯನ್ನು ಪಕ್ಕದಲ್ಲಿಟ್ಟುಕೊಂಡು, ಒಂದು ಸೀಬೆ ಮರದ ಕೆಳಗೆ ತೂಕಡಿಸುತ್ತಿದ್ದ. ಸ್ವಲ್ಪಹೊತ್ತಿಗೆ ಆ ವ್ಯಾಪಾರಿ ಕಣ್ಣುತೆರೆದ. ಗೋಡೆ ಪಕ್ಕ







ದಲ್ಲಿ ಮನುಷ್ಯನ ಆಕಾರ ಕಾಣಿಸಿತು" ಎಲೆ ಕಳ್ಳಾ, ನೀನೆಯೋ ನಿತ್ಯ ನಮ್ಮ ತೋಟದ ತರಕಾರಿ ಕದಿಯುತ್ತಿರುವುದು! ಸಿಕ್ಕಿಬಿದ್ದೆ ಬಿಡು. ಇಂದಿಗೆ ನಿನ್ನ ಅವತಾರ ಮುಗಿಯಿತು" ಎಂದು ಮೆಲ್ಲನೆ ಮರಗಳ ನೆರಳಿನಲ್ಲೇ ಹೋಗಿ ದೊಣ್ಣೆಯಿಂದ ಎರಡೇಟು ಬಾರಿಸಿದ.

ಗೋಡೆಗೆ ಒರಗಿಸಿದ್ದ ವಿಕವಿಕನು ನೆಲಕ್ಕುರುಳಿದ. ಏಟು ಬಿದ್ದರೂ ಕಿರುಗುಡಲಿಲ್ಲವಾಗಿ ವರ್ತಕನಿಗೆ ಅನುಮಾನ ಬಂತು. ಭುಜ ಹಿಡಿದು ಅಲ್ಲಾಡಿಸಿದ. ಅವನು ಚಲಿಸಲಿಲ್ಲ. ದೀಪ ಹತ್ತಿರ ತಂದು ಮುಖ ನೋಡಿದ. ಯಾರೆಂದು ತಿಳಿಯಿತು. ತನ್ನ ದೊಣ್ಣೆಯ ಹೊಡೆತದಿಂದ ವಿಕವಿಕನು ಜ್ಞಾನಶೂನ್ಯನಾಗಿ ಬಿದ್ದಿರುವನೆಂದು ಆ ವ್ಯಾಪಾರಿ ಕಂಗಾಲಾದ.

ತುಸಹೊತ್ತು ಯೋಚಿಸಿ, ವಿಕವಿಕನ ದೇಹವನ್ನು ಹೊತ್ತುಕೊಂಡು ಹೋಗಿ ಅದನ್ನು ಎದುರು ಮನೆಯ ಬಾಗಿಲುವಾಡಕ್ಕೆ ಒರಗಿಸಿ ವರ್ತಕನು ಮೆಲ್ಲನೆ ಅಲ್ಲಿಂದ ನುಸುಳಿಕೊಂಡ.

ಆ ಮನೆಯ ಯಜಮಾನ ಪರಸ್ಥಳಕ್ಕೆ ಹೋಗಿದ್ದ. ಬೆಳಗಿನ ಜಾವದಲ್ಲಿ ಅವನು ಹಿಂತಿರುಗಿ ಬಂದಾಗ ಬಾಗಿಲ ಬಳಿಯಿರುವಾತ ಕಳ್ಳನೆಂದು ಊಹಿಸಿ, ಕುತ್ತಿಗೆ ಹಿಡಿದು ವಿಕವಿಕನನ್ನು ಒಂದುಸಾರಿ ನೂಕಿದ. ಕೂಡಲೇ ವಿಕವಿಕ ಬೀದಿಗೆ ಬಿದ್ದ.

ಆಗ ಗಸ್ತು ತಿರುಗುತ್ತಿದ್ದ ಇಬ್ಬರು ರಾಜಭಟರು ಅಲ್ಲಿಗೆ ಬಂದರು. ನಸುಕು ಕತ್ತಲೆಯಲ್ಲಿ ಯಾರೋ ಒಬ್ಬರು ಕಾದಾಡುತ್ತಿರುವ




ರೆಂದು ಭಾವಿಸಿದರು. ಅವರಲ್ಲಿ ಒಬ್ಬನು ರಸ್ತೆಯಲ್ಲಿ ಬಿದ್ದುದೂ ಅವರಿಗೆ ಕಾಣಿಸಿತು.

ಸರಿ, ಅವರು ಧಾವಿಸಿ ಬಂದು ಕೆಳಗೆ ಬಿದ್ದಾತನನ್ನು ಎತ್ತಿ ನಿಲ್ಲಿಸಿದರು. ದೀಪಹಾಕಿ ನೋಡಿದರೆ ವಿಕವಿಕ. ಅವರು ತಕ್ಷಣ ಆ ಮನೆಯಾತನನ್ನು ಬಂಧಿಸಿದರು.

ಬೆಳಗಾಯಿತು. ಆ ರಾಜಭಟರು ಕೊಲೆಗಾರನೆಂದು ಆರೋಪಿಸಿ ಆತನನ್ನು ರಾಜನ ಎದುರಿನಲ್ಲಿ ನಿಲ್ಲಿಸಿದರು. ರಾಜನು ಕ್ರಮದಂತೆ ವಿಚಾರಣೆ ನಡೆಸಿ, ಕೊಲೆಪಾತಕನಿಗೆ ಮರಣದಂಡನೆ ವಿಧಿಸಿದನು.

ನಾಲ್ಕುರಸ್ತೆ ಸೇರುವ ಕಡೆ ನೇಣುಗಂಬ ನೆಡಿಸಿದರು. ಈ ದುಷ್ಕಾರ್ಯ ಮಾಡಿದಾತನನ್ನು ನೋಡಲು ಜನ ತರಾತುರಿಯಿಂದ

ಅಲ್ಲಿಗೆ ಬಂದು ನೆರೆದರು. ಎಲ್ಲವೂ ಮುಗಿದು ಇನ್ನೇನು ತಪ್ಪಿತಸ್ಥನನ್ನು ನೇಣು ಕಂಬಕ್ಕೆ ಹತ್ತಿಸಬೇಕು. ಅಷ್ಟರಲ್ಲಿ ಬೀಳುತ್ತಾ ಏಳುತ್ತಾ ಒಬ್ಬ ಯುವಕನು ಓಡಿಬಂದು "ಮಹಾ ರಾಜರೇ ಅಪರಾಧಿ ನಾನು. ನಮ್ಮ ವಿಕವಿಕನ ಸಾವಿಗೆ ನಾನೇ ಕಾರಣ. ಈತನಿಗೇನೂ ತಿಳಿಯದು. ಬಿಟ್ಟುಬಿಡಲು ಆಜ್ಞೆಯಾಗಬೇಕು" ಎಂದು ತಾನು ಆತನಿಗೆ ಕೊಟ್ಟ ಔತಣದ ಸಂಗತಿ ತಿಳಿಸಿದ.

ಸರಿ, ಆ ಮನೆ ಯಜಮಾನನನ್ನು ಬಿಟ್ಟು ಬಿಟ್ಟು, ಈ ಯುವಕನನ್ನು ನೇಣು ಹಾಕಿರೆಂದು ಆಜ್ಞೆಮಾಡಿದ ರಾಜ.

ಅಷ್ಟರಲ್ಲಿ ಎದೆಬಡಿದು ಕೊಳ್ಳುತ್ತಾ ವೈದ್ಯ ಅಲ್ಲಿಗೆ ಓಡಿಬಂದ. ಸಂಗತಿಯನ್ನೆಲ್ಲಾ ಹೇಳಿ ತಾನು ಅಪರಾಧಿ ಎಂದ. ಯುವಕನಿಗೆ ಬದಲಾಗಿ ವೈದ್ಯನಿಗೆ ಮರಣ ಶಿಕ್ಷೆ ಜಾರಿ ಮಾಡಿದ ರಾಜ.

ವೈದ್ಯನನ್ನು ನೇಣು ಗಂಬಕ್ಕೆ ಹತ್ತಿಸಬೇಕೆಂದಿರಲು ಇದನ್ನೆಲ್ಲಾ ಕೇಳಿ ಸಹಿಸಲಾರದೆ ವರ್ತಕನು ಓಡಿಬಂದು "ಮಹಾ ಸ್ವಾಮಿ, ಹಂತಕನು ನಾನು, ಹಂತಕನು ನಾನು; ನನ್ನನ್ನು ಶಿಕ್ಷಿಸಿ" ಎಂದ.

ಈ ವಿದ್ಯಮಾನಗಳನ್ನೆಲ್ಲಾ ನೋಡಿ ಎಲ್ಲರಿಗೂ ಆಶ್ಚರ್ಯವಾಯಿತು. ಕೂಡಲೇ ಮಂತ್ರಿ ವೈದ್ಯನನ್ನು ಕರೆದು ವಿಕವಿಕನನ್ನು ಮತ್ತೆ ಪರೀಕ್ಷಿಸುವಂತೆ ಹೇಳಿದ.

ಅರೆ, ಇದೇನು ಆಶ್ಚರ್ಯ. ಉಸಿರಾಡುತ್ತಲೇ ಇದೆ! ವಿಕವಿಕನನ್ನು ಶಸ್ತ್ರಾಲಯಕ್ಕೆ ಸಾಗಿಸಿದರು. ಅಲ್ಲಿ ಪರೀಕ್ಷಿಸಲು ಗಂಟಲಲ್ಲಿ ಸಿಕ್ಕಿಕೊಂಡಿದ್ದ ಮೂಳೆ ಕಾಣಿಸಿತು. ಅದನ್ನು ಹೊರಕ್ಕೆ ತೆಗೆದರು. "ಅಬ್ಬಾ" ಎಂದು ವಿಕವಿಕನು ಎದ್ದು ನೆಟ್ಟಗೆ ಕುಳಿತುಕೊಂಡ. ಅವನಿಗೆ ಮಾತ್ರವಲ್ಲ, ಎಲ್ಲರಿಗೂ ಜೀವಬಂತು.

ಯುವಕ, ವೈದ್ಯ, ವರ್ತಕ, ಮನೆಯ ಯಜಮಾನ ಎಲ್ಲರೂ ನಿರಪರಾಧಿಗಳೆಂದು ಬಿಡುಗಡೆ ಮಾಡಲಾಯಿತು. ಬದುಕಿಕೊಂಡ ವಿಕವಿಕನನ್ನು ಕುರಿತು "ಎಲೈ ವಿಕವಿಕನೇ, ಹಿತವಾದ ಆಹಾರವನ್ನು ಮಿತವಾಗಿ ಭುಜಿಸು. ಇಲ್ಲವಾದರೆ ನಿನ್ನ ಕೆಲಸ ಹೀಗೇ ಹಾಸ್ಯಾಸ್ಪದವಾಗುತ್ತದೆ" ಎಂದು ಎಚ್ಚರಿಸಿದನು ರಾಜ.






ಒಂದಾನೊಂದು ಕಾಲದಲ್ಲಿ ಒಂದು ರಾಜ್ಯವಿತ್ತು. ಅದರ ತುಂಬಾ ಘೋರಾರಣ್ಯಗಳಿದ್ದವು. ಅರಣ್ಯಗಳ ಸಮೀಪದಲ್ಲೇ ಹಳ್ಳಿಗಳಿದ್ದವು. ಅಂತಹ ಒಂದು ಹಳ್ಳಿಯಲ್ಲಿ ಬಡ ದಂಪತಿಗಳ ಕುಟುಂಬ ಒಂದಿತ್ತು. ಅವರಿಗೆ ಮದುವೆಯಾದ ಬಹಳ ಕಾಲಕ್ಕೆ ಒಬ್ಬ ಮಗ ಹುಟ್ಟಿದ. ಆ ಮಗು ಸರ್ಪರಾಜನ ದಯೆಯಿಂದ ಹುಟ್ಟಿದವನಾದುದರಿಂದ ಅವನಿಗೆ ನಾಗಯ್ಯ ಎಂದು ನಾಮಕರಣ ಮಾಡಿ, ಅತಿ ಮಮತೆಯಿಂದ ಸಾಕುತ್ತಿದ್ದರು.

ಆ ದಂಪತಿಗಳಿಗೆ ಹಗಲು ಅಡವಿಗೆ ಹೋಗಿ ಸೌದೆಸೀಳಿ ಹೊತ್ತು ಮುಳುಗುವ ವೇಳೆಗೆ ಮನೆ ಸೇರುವುದು ಪದ್ಧತಿಯಾಗಿತ್ತು. ಅವರೆಂದೂ ಮಗುವನ್ನು ಒಂಟಿಯಾಗಿ ಇಟ್ಟು ಹೋಗುತ್ತಿರಲಿಲ್ಲ. ಅಡವಿಗೆ ಹೋದರೂ ಸಂಗಡ ಕರೆದುಕೊಂಡು ಹೋಗುವರು.

ಅವರು ಅಡವಿಯಲ್ಲಿ ಸೌದೆ ಜೊತೆಮಾಡುತ್ತಿದ್ದರೆ, ಹುಡುಗ ಆ ಗಿಡಮರಗಳನಡುವೆ ಆಡಿಕೊಳ್ಳುತ್ತಿದ್ದ. ಅವನಿಗೆ ಆ ವಯಸ್ಸಿನಲ್ಲಿ ಅಡವಿ ಜಂತುಗಳೆಲ್ಲಾ ತಿಳಿದಿತ್ತು. ನರಿ, ಜಿಂಕೆ, ಕಾಡುಹಂದಿ, ತೋಳ ಮುಂತಾದುವನ್ನು ದೂರದಿಂದಲೇ ಗುರ್ತಿಸುತ್ತಿದ್ದ.

ನಾಗಯ್ಯ ಒಂದು ದಿನ ಗಿಡಗಳ ನಡುವೆ ಆಡುತ್ತಿದ್ದ. ಅವನ ಮಾತಾ ಪಿತರು ಸೌದೆ ಒಟ್ಟು ಗೂಡಿಸುತ್ತಿದ್ದರು. ಅನಿರೀಕ್ಷಿತವಾಗಿ ಮಠಮಠ ಮಧ್ಯಾಹ್ನದಲ್ಲಿ ಆಕಾಶವು ಮೋಡಗಳಿಂದ ಆವರಿಸಿತು. ಕ್ಷಣಮಾತ್ರದಲ್ಲಿ ರೊಯ್ಯನೆ ಬಿರುಗಾಳಿ ಬೀಸ ಲಾರಂಭಿಸಿತು. ಗಾಳಿಯ ಹೊಡೆತಕ್ಕೆ ನಾಗಯ್ಯ ಗಾಳಿಪಠದಂತೆ ಮೇಲೆಮೇಲಕ್ಕೆ ಹಾರಿ ಹೋಗುತ್ತಿದ್ದ!

ಹಾಗೆ ಹಾರಿಹೋದ ಆ ಹಸುಳೆ ಸ್ವಲ್ಪ ಹೊತ್ತಿಗೆ ಎಲ್ಲೋ ದೂರದಲ್ಲಿ ನೆಲದಮೇಲೆ ಬಿದ್ದ. ಗಿಡಗಳ ಮೇಲಿಂದ ಬಿದ್ದ ಕಾರಣ ಭಾರಿ ಪೆಟ್ಟೇನೂ ಆಗಲಿಲ್ಲ. ಆದರೂ ಹುಡುಗ ಬೆದರಿದ. ಅಲ್ಲಿಂದಲೇ ಒಂದು ಸಾರಿ ಅತ್ತಿತ್ತ ನೋಡಿದ. ತನ್ನ ಎದುರಿನಲ್ಲಿದ್ದ ಪೊದೆಯಿಂದ ಬೆಂಕಿಕೆಂಡದಂತೆ ಪ್ರಜ್ವಲಿಸುವ ಎರಡು ಕಣ್ಣುಗಳು ತನ್ನ ಕಡೆಯೇ ನೋಡುತ್ತಿರು

ಎ. ಗುಂಡಪ್ಪ




ವುದು ಅವನಿಗೆ ಕಾಣಿಸಿತು. ಕೂಡಲೇ ಅವು ತೋಳದ ಕಣ್ಣುಗಳೆಂದುಕೊಂಡು, ಅಲ್ಲಿಂದ ಎದ್ದು ಹೋಗೋಣವೆಂದು ಯೋಚಿಸಿದ. ಆ ಸಮಯಕ್ಕೆ ಸರಿಯಾಗಿ ಆ ತೋಳ ಪೊದೆಯಿಂದ ಒಂದು ನೆಗೆತಕ್ಕೇ ನಾಗಯ್ಯನ ಹತ್ತಿರಕ್ಕೆ ಬಂದು ಸೇರಿತು. ನಾಗಯ್ಯ ಭಯದಿಂದ ಕಣ್ಣು ಮುಚ್ಚಿಕೊಂಡ.

ತೋಳ ಸುಮ್ಮನಿರಲಿಲ್ಲ. ಅದರ ಮೃದುವಾದ ನಾಲಗೆಯಿಂದ ಅವನ ಮೈಯನ್ನು ನೆಕ್ಕಲು ಪ್ರಾರಂಭಿಸಿತು. ಸ್ವಲ್ಪ ಚೇತರಿಸಿಕೊಂಡು, ನಾಗಯ್ಯ ಕಣ್ಣು ತೆರೆದ. ಅವನು ಊಹಿಸಿದಂತೆಯೇ ಒಂದು ಹೆಣ್ಣು ತೋಳ ಕಾಣಿಸಿತು. ಅದು ತನ್ನನ್ನು ನೆಕ್ಕುವುದನ್ನು ಕಂಡು ಅವನು ಧೈರ್ಯಮಾಡಿಕೊಂಡ. ಮುಂದೆ ಕ್ರಮೇಣ ಆ ತೋಳನಿಗೆ ನಾಗಯ್ಯನಲ್ಲಿ ಪ್ರೇಮ ಬೆಳೆಯಿತು. ಅದರ ಮಾತೃಪ್ರೇಮ ಅಷ್ಟಿಷ್ಟಲ್ಲ. ಮಾತಿನಲ್ಲಿ ವರ್ಣಿಸಲಶಕ್ಯ. ಪಾಪ, ಅದರ ಮರಿಗಳನ್ನು ಬೇಟೆಗಾರರು ಎತ್ತಿಕೊಂಡು ಹೋಗಿದ್ದರು. ಅದರಿಂದ ನಾಗಯ್ಯನನ್ನೇ ತನ್ನ ಮಗುವಂತೆ ಕಾಪಾಡ ತೊಡಗಿತು. ಬಗೆಬಗೆಯ ಹಣ್ಣುಹಂಪಲನ್ನು ತಂದು ತಿನ್ನಿಸಿ ಸಾಕುತ್ತಿತ್ತು. ಅದು ತಂದು ಕೊಟ್ಟುದುದನ್ನು ತಿಂದು, ಅಡವಿಯಲ್ಲಿ ಇತರ ಮರಿ ತೋಳಗಳೊಂದಿಗೆ ನಾಗಯ್ಯ ಆಡಿಕೊಳ್ಳುತ್ತಿದ್ದ. ಈ ರೀತಿ ಕೆಲವು ದಿನಗಳು ಗತಿಸಿದವು. ನಾಗಯ್ಯನಿಗೆ ತೋಳಕ್ಕಿರುವ ಚಾತುರ್ಯ, ಕಾಲಿನ ಬಲ, ವೇಗಶಕ್ತಿ ಹೆಚ್ಚಾಯಿತು.

ಅವನೊಂದು ದಿನ ತೋಳಗಳೊಂದಿಗೆ ತಿಂಡಿಗಾಗಿ ಒಂದು ಗ್ರಾಮದ ಸಮೀಪಕ್ಕೆ ಹೋದ. ಜೊತೆಯಲ್ಲಿದ್ದ ತೋಳಗಳು ಊರಿನಿಂದ ಕೋಳಿಗಳನ್ನೂ, ಮೇಕೆಮರಿಗಳನ್ನೂ ಎತ್ತಿಕೊಂಡು ಬಂದವು. ನಾಗಯ್ಯನಿಗೆ ಅಲ್ಲಿನ ಜನರು ಕಾಣಿಸಿದ ಕೂಡಲೇ ತನ್ನ ಬಾಲ್ಯ ಜ್ಞಾಪಕಕ್ಕೆ ಬಂದು, ತಾಯಿತಂದೆಗಳ ನೆನಪಾಯಿತು.

ನಾಗಯ್ಯ ಒಂದು ಮನೆಗೆ ಹೋದ. ಬಾಗಿಲು ತಟ್ಟಿದ. ಒಳಗಿನಿಂದ ಮನೆಯಾಕೆ ಮತ್ತು ಯಜಮಾನ ಹೊರಕ್ಕೆ ಬಂದರು. ಅವರನ್ನು ನೋಡಿದ ಕೂಡಲೇ ಮಾನವರ ಕಪಟ ಸ್ವಭಾವವನ್ನು ಅರಿಯದ ನಾಗಯ್ಯ ಸರಳತನದಿಂದ "ನನ್ನ ಅಪ್ಪ, ಅಮ್ಮ ನೀವೇನೇ?" ಎಂದು ವಿಚಾರಿಸಿದ. ಅದಕ್ಕೆ ಮನೆಯಾಕೆ "ಅಯ್ಯೋ, ನನ್ನಪ್ಪಾ



ನೀನೇ ನನ್ನ ಮಗು. ಎಷ್ಟು ದಿನಗಳಿಗೆ ಮತ್ತೆ ಕಾಣಿಸಿದೆಯಪ್ಪಾ ನನ್ನ ಚಿನ್ನ" ಎಂದು ಕಪಟ ಪ್ರೇಮದಿಂದ ಬಾಲಕನನ್ನು ಅಪ್ಪಿಕೊಂಡಳು. ತಾಯಿ ತಂದೆಗಳನ್ನು ಮತ್ತೆ ಕೂಡಿಕೊಂಡೆನೆಂದು ನಾಗಯ್ಯ ಸಂತೋಷಗೊಂಡ.

ಮಾರನೆಯದಿನ ಆ ದಂಪತಿಗಳು ಆ ಬಾಲಕನಿಗೆ ಹೊಲದಲ್ಲಿ ಮಣ್ಣು ಅಗೆಯುವ ಕೆಲಸ ಒಪ್ಪಿಸಿದರು. ಬಿಸಿಲು ನಡುನೆತ್ತಿಯ ಮೇಲಕ್ಕೆ ಬರುವತನಕ ಕೆಲಸಮಾಡಿ ಬಳಲಿದ್ದ ನಾಗಯ್ಯ ಒಂದು ಮರದ ಕೆಳಗೆ ವಿಶ್ರಾಮ ಪಡೆಯೋಣವೆಂದು ಬಂದ. ಅಷ್ಟರಲ್ಲಿ ಪಕ್ಕದ ಗುಡಿಸಲಿನಿಂದ ಯಾರೋ ಮಾತನಾಡುತ್ತಿರುವುದು ಕೇಳಿಸಿತು. ಅವನು ಕಿವಿ ನೆಟ್ಟಗೆಮಾಡಿ ಅದನ್ನು ಕೇಳುತ್ತಿದ್ದ.

"ನೀವು ತುಂಬಾ ಬುದ್ಧಿವಂತರು. ಗಟ್ಟಿ ಮುಟ್ಟಾದ ಹುಡುಗ. ಇನ್ನು ನಾವು ಕೆಲಸ ಮಾಡಬೇಕಾದ ಅಗತ್ಯವಿಲ್ಲ. ಎಲ್ಲಾ ಅವನೇ ಮಾಡಿಕೊಂಡು ಹೋಗುತ್ತಾನೆ" ಎಂದಳು ಹೆಂಡತಿ. ಯಜಮಾನ ನಗುತ್ತಾ "ಮತ್ತೇನೆಂದು ತಿಳಿದಿರುವೆ? 'ನಮ್ಮ ಮಗೂ ಕಣೋ ನೀನು' ಎಂದರಾಯಿತು. ನಾವು ತಿಂದು ಉಳಿದ ಅಗಳು ಹಾಕಿದರೆ ಸಾಕು, ಬಿದ್ದುಕೊಂಡಿರುತ್ತಾನೆ" ಎಂದ.

ಈ ಮಾತು ಕೇಳಿ ನಾಗಯ್ಯ ತಾನು ಮೋಸಹೋದೆನೆಂದು ಅರಿತುಕೊಂಡು ಯಾರಿಗೂ ತಿಳಿಯದಂತೆ ಬೇರೊಂದು ಗ್ರಾಮಕ್ಕೆ ಹೊರಟು ನಡೆದುಬಿಟ್ಟ.




ಸಂಜೆ ಹೊತ್ತಿಗೆ ಇನ್ನೊಂದು ಗ್ರಾಮವನ್ನು ಸೇರಿಕೊಂಡ. ಅಲ್ಲೊಂದು ಮನೆಯ ಬಳಿಗೆ ಹೋಗಿ, ಬಾಗಿಲಲ್ಲಿ ಕುಳಿತಿದ್ದ ಗಂಡ ಹೆಂಡತಿಯರನ್ನು ಕುರಿತು "ನನ್ನ ತಂದೆ ತಾಯಿ ನೀವೇನಾ?" ಎಂದು ಕೇಳಿದ.

ಮೊದಲು ಅವರಿಬ್ಬರೂ ಚಕಿತರಾದರೂ, ಆ ತರುವಾಯ ಚೇತರಿಸಿಕೊಂಡರು. ಗಂಡ ಹೆಂಡತಿಗೆ ಸಂಜ್ಞೆಮಾಡಿ "ಹೌದಪ್ಪಾ, ನೀನು ನಮ್ಮ ಮಗು. ಎಷ್ಟುದಿನಕ್ಕೆ ಹಿಂತಿರುಗಿದೆಯಪ್ಪಾ" ಎಂದು ಆಲಿಂಗಿಸಿಕೊಂಡ.

ನಾಗಯ್ಯ ನಿಜವಿರಬೇಕೆಂದು ಭಾವಿಸಿದ. ಆ ರಾತ್ರಿ ಮನೆಯಾತ ನಾಗಯ್ಯನೊಂದಿಗೆ ಆ ಮಾತು ಈ ಮಾತು ಆಡುತ್ತಾ "ಅಪ್ಪಾ ನಾಳೆಯಿಂದ ಹೊಲದ ಕೆಲಸ ನೀನು ನೋಡಿಕೊಳ್ಳಪ್ಪಾ. ನಾವು ತುಂಬಾ ಬಡವರು.







ಕೆಲಸ ಕಾರ್ಯಗಳನ್ನು ನೀನೇ ಸರಿಮಾಡಿ ಕೊಂಡು ಹೋಗಬೇಕು" ಎಂದು ಹೇಳಿ ಒಂದಿಷ್ಟು ಗಂಜಿ ನೀರು ಕೊಟ್ಟರು.

ಆದರೆ ಆ ರಾತ್ರಿ ನಾಗಯ್ಯ ಮಲಗಿಕೊಂಡ ತರುವಾಯ ಆ ಗಂಡ ಹೆಂಡತಿಯರು ನಗು ನಗುತ್ತಾ ವಿವಿಧ ಭಕ್ಷ್ಯಗಳನಿಟ್ಟುಕೊಂಡು ಊಟ ಮಾಡುವುದನ್ನು ಕಂಡು ಹಿಡಿದುಬಿಟ್ಟ ನಾಗಯ್ಯ. ಯಾಕೆಂದರೆ ಅವನ ಕಿವಿ ಮತ್ತು ಮೂಗು ತೋಳದಂತೆ ಧ್ವನಿ ಮತ್ತು ವಾಸನೆ ಗಳನ್ನು ಕಂಡುಹಿಡಿಯಬಲ್ಲವು!

ಇವರು ನಿಜವಾಗಿ ನನ್ನ ಮಾತಾಪಿತರಲ್ಲ; ಎಂದು ನಿರ್ಧರಿಸಿ, ನಾಗಯ್ಯ ಅಲ್ಲಿಂದ ಬೇರೊಂದು ಗ್ರಾಮಕ್ಕೆ ತೆರಳಿದ.

ಆದರೆ ಆ ಮನೆಯವನು ಸುಮ್ಮನೆ ಬಿಡುವ ಆಸಾಮಿಯಲ್ಲ. ನಾಗಯ್ಯನನ್ನು ಹಿಡಿದು ತಂದು ಒಂದು ಕೋಣೆಯಲ್ಲಿ ಕೂಡಿ ಬೀಗ ಹಾಕಿದ. "ಇಲ್ಲಿ ಕೂಲಿಯವರು ಸಿಗುವುದು ಬಹಳ ಕಷ್ಟ. ನೀನು ಕೆಲಸಮಾಡಲು ಒಪ್ಪುವ ತನಕ ನೀರೂಸಹ ಕೊಡುವುದಿಲ್ಲ" ಎಂದು ಅವಡುಗಚ್ಚಿದ.

ಹಗಲೆಲ್ಲಾ ನಾಗಯ್ಯ ಕೋಣೆಯಲ್ಲೇ ಇದ್ದು ಬಿಟ್ಟ. ರಾತ್ರಿಯಾಗಲು ತೋಳದಂತೆ ಕಿರುಚಲಾರಂಭಿಸಿದ. ಆ ಕೂಗು ಕೇಳಿ ಸುತ್ತ ಮುತ್ತಲಿದ್ದ ಅರಣ್ಯಗಳಿಂದ ತೋಳಗಳು ಗುಂಪು ಗುಂಪಾಗಿ ಬಂದು ಮನೆಯನ್ನು ಮುತ್ತಿದವು. ಮನೆಯ ಯಜಮಾನ ಭಯದಿಂದ ನಡುಗುತ್ತಾ ನಾಗಯ್ಯನನ್ನು ಕೋಣೆಯಿಂದ ಹೊರಕ್ಕೆ ಬಿಟ್ಟು, ಕ್ಷಮಿಸುವಂತೆ ಪ್ರಾರ್ಥಿಸಿದ.

ಹೇಗಾದರೂ ತಾಯಿ ತಂದೆಗಳನ್ನು ಸೇರ ಬೇಕೆಂಬ ಹಂಬಲದಿಂದ ನಾಗಯ್ಯ ಅಲ್ಲಿಂದ ಮುಂದಕ್ಕೆ ಹೊರಟ. ಎಲ್ಲೆಲ್ಲೋ ಸುತ್ತಿ ಸುತ್ತಿ ಕೊನೆಗೊಂದು ಗ್ರಾಮವನ್ನು ಮುಟ್ಟಿದ. ಅಲ್ಲೊಂದು ಮನೆಯ ಮುಂದೆ ದಂಪತಿಗಳನ್ನು ನೋಡಿದ. ಅವರೊಂದು ಭಾರಿ ಬೇವಿನ ಮರದ ಕೆಳಗೆ ಭೀತಿಯಿಂದ ಕುಳಿತಿದ್ದರು. ನಾಗಯ್ಯ ಅವರನ್ನು ಸಮೀಪಿಸಿ "ನನ್ನ ಅಪ್ಪ ಅಮ್ಮ ನೀವೇನಾ?" ಎಂದು ಕೇಳಿದ.

ಆ ದಂಪತಿಗಳು ನಾಗಯ್ಯನಕಡೆ ನೋಡಿ ದರು. ಏನೋ ಗುರುತು ಹಿಡಿದವರಂತೆ "ಅಪ್ಪಾ, ಬಿರುಗಾಳಿಯಲ್ಲಿ ನಮ್ಮ ಮಗು ಹೊಡೆದುಕೊಂಡು ಹೋದ. ನಿಜವಾಗಿ ನೀನು ನಮ್ಮ ಮಗನಂತೆಯೇ ಇರುವೆ. ನಾವೇ ನಿನ್ನ

ತಂದೆ ತಾಯಿ" ಎಂದು ನಾಗಯ್ಯನನ್ನು ಅಪ್ಪಿಕೊಂಡರು. ಈ ವರೆವಿಗೆ ಎರಡು ಬಾರಿ ಮೋಸಹೋಗಿದ್ದ ನಾಗಯ್ಯ ತನ್ನ ತೋಳದ ಬುದ್ಧಿ ಸ್ವಲ್ಪ ಉಪಯೋಗಿಸಿದ.

ಆ ರಾತ್ರಿ ಎರಡು ಮೂರು ಬಗೆ ತಿಂಡಿ ತಿನಸುಗಳನ್ನು ಬಡಿಸಿ ಅಚ್ಚುಕಟ್ಟಾಗಿ ಬಹು ಪ್ರೀತಿಯಿಂದ ಭೋಜನವಿಟ್ಟರು.

"ನನಗೆ ಮೈ ಹುಷಾರಿಲ್ಲ" ಎಂದು ನಾಗಯ್ಯ ತಿನ್ನದೆ ಸುಮ್ಮನಿದ್ದ. ಬೆಳಗ್ಗೆ ತಾಯಿ ಬಂದು ಎಬ್ಬಿಸಿದರು. "ನನಗೆ ತುಂಬಾ ಆಯಾಸವಾಗಿದೆ. ಈ ದಿವಸ ನಾನು ಕೆಲಸ ಮಾಡಲಾರೆ" ಎಂದ.

ಈ ಮಾತು ಕೇಳಿ ತಾಯಿ ಆಶ್ಚರ್ಯಗೊಂಡಳು. ಗಂಡನನ್ನು ಕರೆದಳು. ಅವನು ಹೇಳಿದ ಮಾತನ್ನು ಹೇಳಿದಳು.

ಇಬ್ಬರೂ ನಾಗಯ್ಯನ ಹತ್ತಿರ ಬಂದು "ಅಪ್ಪಾ, ಮಗೂ, ನೀನಿನ್ನೂ ಹಸುಳೆ. ಆಟಪಾಠಗಳಲ್ಲಿ ಮಗ್ನವಾಗಿರಬೇಕಾದ ವಯಸ್ಸು. ನಾವೇ ನಿನಗಾಗಿ ಕೆಲಸಮಾಡುತ್ತೇವೆ. ನೀನೇಕೆ ಕೆಲಸ ಮಾಡಬೇಕು, ಮಗೂ?" ಎಂದು ಪ್ರೀತಿಯಿಂದ ಮುದ್ದಾಡಿದರು. ಈ ಮಾತು ಕೇಳಿ ನಾಗಯ್ಯ ತನ್ನ ನಿಜವಾದ ತಂದೆತಾಯಿಗಳು ದೊರೆತರೆಂದು ತಿಳಿದುಕೊಂಡ. ನಿಜವಾದ ಹೆತ್ತವರಿಗೂ ಇತರರಿಗೂ ಇರುವ ಭೇದವು ಸ್ವತಃ ಅನುಭವದಿಂದ ಅವನಿಗೆ ತಿಳಿಯಿತು. ಅಂದಿನಿಂದ ಶ್ರದ್ಧಾ ಭಕ್ತಿಗಳಿಂದ ಅವರ ಆಜ್ಞೆಗಳನ್ನು ಪಾಲಿಸುತ್ತಾ ಚೆನ್ನಾಗಿ ಓದಲಾರಂಭಿಸಿದ.

ಆದರೂ ನಾಗಯ್ಯ ತನ್ನನ್ನು ಪ್ರೀತಿಯಿಂದ ಸಾಕಿದ ತಾಯಿ ತೋಳವನ್ನು ಮಾತ್ರ ಸಂಪೂರ್ಣವಾಗಿ ಮರೆಯದಾದನು. ರಾತ್ರಿಯಲ್ಲಿ ಊರ ಹೊರಗಿನ ಅಡವಿಗಳಲ್ಲಿ ಸಂಚರಿಸುತ್ತಾ ಅರಚುವ ತೋಳದ ಧ್ವನಿ ಕೇಳಿಸಿದಾಗಲೆಲ್ಲಾ ಅವನಿಗೆ ನಿದ್ದೆ ಬರುತಿರಲಿಲ್ಲ. ತೋಳದೊಂದಿಗೆ ಆಡಿದ ಆಟಗಳೆಲ್ಲಾ ನೆನಪಾಗುತಿತ್ತು.

"ಹೀಗೆ ಅರಚುತ್ತಿರುವ ತೋಳಗಳಲ್ಲಿ ನನ್ನ ತಾಯಿ ಸಹ ಇರುವಳು. ನನ್ನನ್ನು ಕಾಣದೆ ಅಳುತ್ತಿದ್ದಾಳು" ಎಂದುಕೊಂಡು ಕಂಬನಿ ಸುರಿಸುವನು ನಾಗಯ್ಯ.



## ಕರೆದರೆ

ಸ್ನೇಹಿತ ಕರೆದರೆ ಆಟಕ್ಕೆ
ಅಣ್ಣನು ಕರೆದರೆ ತೋಟಕ್ಕೆ
ಅಮ್ಮನು ಕರೆದರೆ ಊಟಕ್ಕೆ
ಅಪ್ಪನು ಕರೆದರೆ ಪಾಠಕ್ಕೆ
ಅಜ್ಜಿ ಕರೆದರೆ ಕಥೆಗಳಿಗೆ
ಅಜ್ಜನು ಕರೆದರೆ ಹರಟೆಗೆ
ಪೋಲೀಸ್ ಕರೆದರೆ ಜೈಲಿಗೆ
ಸಾಲಿಗ ಕರೆದರೆ ವಸೂಲಿಗೆ
ತಿಂಗಳಿಗೊಮ್ಮೆ ಪೋಸ್ಟ್‌ಮ್ಯಾನ್ ಕರೆದರೆ
ಚಂದಮಾಮನಿಗೆ

ಕೆ. ಎಂ. ಅನ್ನಪೂರ್ಣ

## ಕಂದನ ಕೊಳಲು

೧

ಕೊಳಲನು ಊದುತ
ಕುಣಿಯುತ ಬಂದನು
ಬಾಲಕ ಗೋವಿಂದ.
ಮರಗಳನೇರುತ
ಗಿರಿಗಳಲಲೆಯುತ
ನೀಡುವ ಆನಂದ.

೨

ಅವನಾ ಕೊಳಲಿನ
ಗಾನವ ಕೇಳುತ
ಗಿರಿಗಳು ನಗುತಿಹವು
ಪಶುಗಳು ಕುಣಿವುವು
ಪಕ್ಷಿಗಳುಲಿವುವು
ಜಗಕೆಲ್ಲಾ ಸುಖವು.

—ಶಿಗ್ಗಾಂವಿ ವೀರೇಶ್ವರ

## ಭಿಕ್ಷುವಿನಳಲು

ಉಡಲೂ ಉಣಲೂ ಗತಿಯಿಲ್ಲದ ಬಡ।
ಭಿಕ್ಷುವು ನಾನಮ್ಮಾ। ಎನಗಕ್ಕಿಗಳಿಲ್ಲವಮ್ಮಾ॥
ಬೇಡೀ ಕಾಡೀ ಬಳಲಿದ ಬಡವಗೆ।
ದಾರಿಯ ತೋರಮ್ಮಾ। ನೀ ದಯೆಯನು
ಬೀರಮ್ಮಾ॥
ಪಶುವಿನ ಬಾಳನು ತಳೆದಿಹ ಬಡವನ।
ಹಸಿವೆಯ ನೀಗಮ್ಮಾ। ನೀ ಪುಣ್ಯವ
ಪಡೆಯಮ್ಮಾ॥
ಅನಾಥನೆನಿಸಿದ ಅಂಧನಿರುವೆ ನಾ।
ಅನ್ನವ ನೀಡಮ್ಮಾ, ಹಿಡಿ। ಯನ್ನವ
ನೀಡಮ್ಮಾ॥
ಮಳೆ ಬಿಸಿಲೆನ್ನದೆ ತೊಳಲುವ ದೀನಗೆ।
ನೆಲೆಯನು ತೋರಮ್ಮಾ। ನೀ ನೆಲೆಯನು
ತೋರಮ್ಮಾ॥
ಮನೆ ಮನೆ ಬಾಗಿಲಿಗೈದುತ ಬೇಡುವ।
ಭಿಕ್ಷುವ ನೋಡಮ್ಮಾ। ನೀ ಭಿಕ್ಷೆಯ
ನೀಡಮ್ಮಾ॥
ಹರಕಲು ಬಟ್ಟೆಯ ಧರಿಸಿದ ಭಿಕ್ಷುಗೆ।
ವಸನವ ನೀಡಮ್ಮಾ। ನೀ ಅಶನವ
ನೀಡಮ್ಮಾ॥
ತಿಂಡಿಯ ತಿನ್ನದೆ ತಿಂಗಳು ಕಳೆದಿಹ।
ತಿರುಕಗೆ ತಾರಮ್ಮಾ। ನೀ ತಿನಸನು
ತಾರಮ್ಮಾ॥
ದೇವನ ನೆನೆಯುತ ದಿನದಿನ ಬೇಡುವೆ।
ಭಿಕ್ಷೆಯ ನಾನಮ್ಮಾ। ನೀ ಭಿಕ್ಷೆಯ
ನೀಡಮ್ಮಾ॥
ಭಿಕ್ಷುವು ಬಂದೊಡೆ ಭಿಕ್ಷೆಯ ಕೊಡೆ, ಸಿರಿ-।
ಅಕ್ಷಯವಹುದಮ್ಮಾ। ಇದು ನಿಶ್ಚಯ
ತಿಳಿಯಮ್ಮಾ॥

"ಕೈನಭ"



# ಬೆಸ್ತರವನ ಹೆಂಡತಿ

ಒಂದೂರಿನಲ್ಲಿ ಒಬ್ಬ ಬೆಸ್ತರವನಿದ್ದನು. ಅವನು ಸದಾಚಾರನು. ಆದರೆ ಅವನ ಹೆಂಡತಿ ಮಾತ್ರ ಗಯ್ಯಾಳಿ, ಮಾಯಾವಿನಿ.

ಆ ಬೆಸ್ತ ದಂಪತಿಗಳು ಒಂದು ಜೋಪಡಿಯಲ್ಲಿ ವಾಸಿಸುತ್ತಿದ್ದರು. ಅವರ ಗುಡಿಸಲು ಬಹಳ ಶಿಥಿಲವಾಗಿ, ವಾಸಕ್ಕೆ ಅಯೋಗ್ಯವಾಗಿತ್ತು. ಜೀರ್ಣವಾದ ಗುಡಿಸಲನ್ನು ಸರಿಪಡಿಸಿಕೊಳ್ಳಬೇಕೆಂದು ಅವರ ಅಭಿಲಾಷೆ. ಆದರೆ ಅವರಲ್ಲಿ ಹಣ ವಿರಲಿಲ್ಲ.

ಒಂದು ದಿನ ಬೆಸ್ತರವನು ಎಂದಿನಂತೆ ತಂಗೂಳನ್ನು ಉಂಡು, ಬಲೆಯನ್ನೆತ್ತಿಕೊಂಡು ಸಮುದ್ರದ ಕಡೆಗೆ ಹೊರಟ. ಬಲೆ ಬೀಸಿ ಮಧ್ಯಾಹ್ನವಾದರೂಸಹ ಒಂದು ಮೀನೂ ಬಲೆಯಲ್ಲಿ ಬೀಳಲಿಲ್ಲ. ಸಾಯಂಕಾಲವಾಯಿತು. ಮನೆಗೆ ಹಿಂತಿರುಗಬೇಕೆಂದು ನಿಶ್ಚಯಿಸಿದ. ಅಷ್ಟರಲ್ಲಿ ಬಲೆ ಕೊಂಚ ಕದಲಿದಂತೆ ತೋರಿತು. ಬಲೆಯನ್ನು ಎಳೆಯಲು ಆತನೊಬ್ಬನಿಂದ ಸಾಧ್ಯವಾಗದಷ್ಟು ಭಾರವಾಗಿತ್ತು. ಹಾಗೂ ಹೀಗೂ ಏನೋ ಪಾಡುಪಟ್ಟು ಅವನು ಬಲೆಯನ್ನು ಹೊರಕ್ಕೆಳೆದ.

ಒಂದು ಭಾರಿ ಮೀನು ಬಲೆಯಲ್ಲಿ ಬಿದ್ದದೆ. ಬೆಸ್ತರವನ ಸಂತೋಷಕ್ಕೆ ಪಾರವೇ ಇಲ್ಲ. ಆ ಮೀನು ಮಾನವ ಭಾಷೆಯಲ್ಲಿ "ಎಲೈ ಜಾಲಗಾರನೇ, ನಾನು ನಿಜವಾದ ಮೀನಲ್ಲ; ರಾಜಕುಮಾರನು. ಒಂದು ಭೂತವು ಮಂತ್ರ ಹಾಕಿ ನನ್ನನ್ನು ಈ ರೂಪಕ್ಕೆ ಬದಲಾಯಿಸಿದೆ. ನನ್ನನ್ನು ಹಿಡಿಯುವುದರಿಂದ ನಿನಗೇನೂ ಪ್ರಯೋಜನವಾಗದು. ನನ್ನನ್ನು ಬಿಟ್ಟುಬಿಡು" ಎಂದು ಬೇಡಿಕೊಂಡಿತು.

ಮೀನು ಈರೀತಿ ಮಾತನಾಡಿದುದನ್ನು ಕಂಡು ಬೆಸ್ತರವನು ಅಚ್ಚರಿಗೊಂಡನು. ಮತ್ತೆ ಆ ಮೀನನ್ನು ನೀರಿನಲ್ಲಿ ಬಿಟ್ಟು, ಅಂದು ಬರಿಗೈಯಲ್ಲಿ ಮನೆಗೆ ಹಿಂತಿರುಗಿದ.

ಮನೆ ಸೇರಿದಕೂಡಲೇ "ಇಂದೇನೂ ಸಿಗಲಿಲ್ಲವೇ?" ಎಂದು ಕೇಳಿದಳು ಅವನ ಹೆಂಡತಿ. ಅವನು ನಡೆದ ವಿಷಯವನ್ನೆಲ್ಲಾ ಹೇಳಿದ.

ಬಿ. ಕೊಟ್ಟಾರಿ



"ಆತನು ರಾಜಕುಮಾರನೆಂದು ಹೇಳಿದೆ ಯಲ್ಲಾ, ಆತನ ಹತ್ತಿರ ಏನಾದರೂ ಕೇಳಿ ಕೊಳ್ಳಲಿಲ್ಲವೇ?" ಎಂದಳು ಹೆಂಡತಿ.

"ಇಲ್ಲ" ಎಂದ ಬೆಸ್ತ.

"ನೀನೆಲ್ಲೋ ಬೆಪ್ಪುತಕ್ಕಡಿ, ರಾಜಕುಮಾರ ನೆಂದು ತಿಳಿದು, ತಿಳಿದೂ ಏನನ್ನೂ ಕೇಳಿ ಕೊಳ್ಳದೆ ಬರಿಕೈಯಲ್ಲಿ ಯಾರಾದರೂ ಬರು ವರೇ? ಹೋಗು, ಮತ್ತೊಮ್ಮೆ ಹೋಗಿ ನಮ್ಮ ಗುಡಿಸಲನ್ನು ಹೊಸ ಮನೆಯನ್ನಾಗಿ ಮಾಡಿಸಿ ಕೊಡಬೇಕೆಂದು ಕೇಳಿಕೋ" ಎಂದಳು.

ಆ ಮಾತಿಗೆ ಅವನು "ಆ ಮೀನು ಹೊರಟು ಹೋಗಿರಬಹುದು. ಅದು ಮತ್ತೆ ನನಗೆಲ್ಲಿ ಸಿಕ್ಕುತ್ತದೆ?" ಎಂದು ಗೊಣಗಿದ.

"ಹಾಂ! ಹಾಗೆಂದರೇನು? ಮೊದಲು ಎಲ್ಲಿ ಬಲೆ ಬೀಸಿದೆಯೋ ಅದೇ ಸ್ಥಳಕ್ಕೆ ಹೋಗಿ ಆ ಮೀನನ್ನು ಕೂಗು. ನಿನಗೆ ಕೇಳಲು ಸಂಕೋಚವಾದರೆ ನಾನು ಕೇಳಿದೆನೆಂದು ಹೇಳು" ಎಂದು ಬಲವಂತಪಡಿಸಿದಳು ಆಕೆ.

ಆಕೆಯ ಕಾಟ ತಡೆಯಲಾರದೆ ಅವನು ಸಮುದ್ರತೀರಕ್ಕೆ ಮತ್ತೆ ಹೋದ.

ತೀರದಲ್ಲಿ ನಿಂತು "ಎಲೈ ರಾಜಕುಮಾರ ನಾದ ಮೀನೇ," ಎಂದು ಕೂಗಿದ. ಕೂಡಲೇ ಆ ಮೀನು ನೀರಿನಿಂದ ತಲೆಯನ್ನು ಮೇಲ ಕ್ಕೆತ್ತಿ "ಏನಪ್ಪಾ, ಹೀಗೆ ಬಂದೆ?" ಎಂದು ಪ್ರೀತಿಯಿಂದ ಕೇಳಿತು.

ಬೆಸ್ತರವನು ಭಯಕಂಪಿತನಾಗಿ ಮೆಲ್ಲನೆ "ಮೀನೇ, ಮೀನೇ, ನನ್ನ ಹೆಂಡತಿ ನನ್ನ ನ್ನಿಲ್ಲಿಗೆ ಕಳುಹಿಸಿದಳು. ಆದರಿಂದ ನಾನು ಮತ್ತೆ ಬರಬೇಕಾಯಿತು. ನಮ್ಮ ಹಳೆಯ ಜೋಪಡಿಯನ್ನು ಹೊಸ ಮನೆಯನ್ನಾಗಿ ಮಾಡಿಸಿ ಕೊಡಬೇಕೆಂದು ನಿನ್ನ ಹತ್ತಿರ ಕೋರುವಂತೆ ಹೇಳಿಕಳುಹಿಸಿದ್ದಾಳೆ. ಅದ ಕ್ಕಾಗಿ ಬಂದೆ" ಎಂದನು.

"ಓಸ್, ಇದಕ್ಕೋಸ್ಕರ ಮತ್ತೆ ಬಂದೆಯಾ? ಸರಿ, ಹಾಗೆಯೇ ಮಾಡೋಣ" ಎಂದು ಹೇಳಿ ಬುಳಕ್ಕನೆ ನೀರಿನಲ್ಲಿ ಮುಳು ಗಿತು ಆ ಮಹಾಮೀನು.

ಬೆಸ್ತರವನು ಮನೆಕಡೆ ತಿರುಗಿದ. ತಮ್ಮ ಪಾಳ್ಯವನ್ನು ಸೇರಿಕೊಂಡ. ತನ್ನ ಜೋಪಡಿ ಯಿದ್ದ ಸ್ಥಳದಲ್ಲಿ ಒಂದು ಹೊಸ ಮನೆ ಕಾಣಿಸು ತ್ತಿದೆ. ಆ ಮನೆಯ ಮಾಳಿಗೆ ಮೇಲೆ ನಿಂತಿದ್ದ

ಅವನ ಪತ್ನಿ 'ಬನ್ನೀಂದ್ರೆ, ಬನ್ನಿ ಇತ್ತಕಡೆ ಮೆಟ್ಟಲು ಹತ್ತಿಮೇಲಕ್ಕೆ ಬನ್ನಿ' ಎಂದು ಉಲ್ಲಾಸದಿಂದ ಕರೆಯಲು ಅವನು ಅಚ್ಚರಿಗೊಂಡನು. ಮೆಟ್ಟಲನ್ನೇರಿ ಮೇಲೆ ಹೋದ.

ಆಕೆ ಗಂಡನಿಗೆ ಹೊಸ ಮನೆಯನ್ನು ತೋರಿಸಿದಳು. "ನೋಡಿದಿರಾ ಮತ್ತೆ. ನಮ್ಮ ಮನೆ ಹೇಗೆ ಬದಲಾಯಿಸಿತು" ಎಂದು ಅತ್ಯಾನಂದದಿಂದ ಡಂಭವಾಗಿ ನುಡಿದಳು.

ಇದೆಲ್ಲಾ ತನ್ನ ಹೆಂಡತಿಯ ಬುದ್ಧಿ ಚಾತುರ್ಯದಿಂದಲೇ ಸಾಧ್ಯವಾಯಿತೆಂದು ಅವನೂ ಸಂತೋಷಿಸಿದ.

ಆ ದಂಪತಿಗಳಿಗೆ ಹದಿನೈದು ದಿನಗಳು ತುಂಬಾ ಆನಂದವಾಗಿ ಕಳೆದುಹೋದವು. ತರುವಾಯ ಒಂದು ದಿನ ಆ ಹೆಂಡತಿಯಾದವಳು ಹೇಳಿದಳು: "ಏನೂಂದ್ರೆ, ಈ ಮನೆ ಅಚ್ಚುಕಟ್ಟಾಗಿಯೇನೋ ಇದೆ. ಆದರೆ ಬಂಧು ಬಳಗ ಬಂದರೆ ಸಾಕಾಗದು. ನಮಗೇ ಮಕ್ಕಳು ಮರಿಗಳಾದರೆ ಸಾಕಾಗದು. ನಾವು ನಾನಾ ಅವಸ್ಥೆ ಪಡಬೇಕಾಗುತ್ತದೆ. ಅದಷ್ಟೇ ಅಲ್ಲ; ಮನೆಗೆ ತಕ್ಕ ಹಿತ್ತಲು ಇಲ್ಲ, ಆದುದರಿಂದ ನೀವು ಮತ್ತೆ ಆ ಮೀನಿನ ಹತ್ತಿರ ಹೋಗಿ ಇದಕ್ಕಿಂತಲೂ ದೊಡ್ಡ ಮಹಡಿ ಮನೆ ಬೇಕೆಂತಲೂ, ಅದಕ್ಕೆ ಉಚಿತವಾದ ಹಿತ್ತಲು ಇರಬೇಕೆಂತಲೂ ಕೋರಿಕೊಂಡು ಬನ್ನಿ" ಎಂದಳು.

ಹೆಂಡತಿಯ ಉಪಟಳ ತಡೆಯಲಾರದೆ ಬೆಸ್ತರವನು ಮತ್ತೆ ಸಮುದ್ರತೀರಕ್ಕೆ ಹೋಗಿ,






ಮೀನನ್ನು ಕೂಗಿದ. ಮೀನು ಮೇಲಕ್ಕೆ ಬಂತು. 'ಏನು ವಿಷಯವಪ್ಪಾ?' ಎಂದು ಕೇಳಿತು. "ಮೀನೇ, ಮೀನೇ, ಈಗಿರುವ ಮನೆ ತುಂಬಾ ಇಕ್ಕಟ್ಟಾಗಿದೆಯಂತೆ. ಇದಕ್ಕಿಂತಲೂ ದೊಡ್ಡ ಮನೆ, ಅದಕ್ಕೆ ತಕ್ಕಂತಹ ಹಿತ್ತಲು ಕೋರಿಕೊಳ್ಳುವಂತೆ ಹೇಳಿ ಕಳುಹಿಸಿದ್ದಾಳೆ ನನ್ನ ಹೆಂಡತಿ" ಎಂದ ಬೆಸ್ತ.

"ಹಾಗೇ ಆಗಲಿ" ಎಂದು ಮೀನು ನೀರಿನಲ್ಲಿ ಮುಳುಗಿ ಮಾಯವಾಯಿತು.

ಬೆಸ್ತರವನು ಮನೆಗೆ ಹಿಂತಿರುಗಿದ. ತನ್ನ ಚಿಕ್ಕ ಮನೆಗೆ ಬದಲು ದೊಡ್ಡ ಉಪ್ಪರಿಗೆ ಮನೆ, ಆ ಮನೆಯ ಸುತ್ತಲೂ ವಿಸ್ತಾರವಾದ ದೊಡ್ಡ ತೋಟ ಆತನ ಕಣ್ಣಿಗೆ ಬಿತ್ತು. ಕೆಲವು ದಿನಗಳು ಅವರಿಗೆ ಸುಖವಾಗಿ ಸಾಗಿದುವು.



ಒಂದು ದಿನ ಬೆಸ್ತರವನ ಭಾರ್ಯೆ "ಏನೂಂದ್ರೆ, ಇಂತಹ ಭಾರಿಮನೆಯ ಒಡತಿಯಾದ ನಾನು ಸಾದಾ ಸಂಸಾರಿಯಾಗಿರುವುದು ಸೊಗಸಾಗಿ ಕಾಣಿಸದು. ನಾನೊಬ್ಬ ರಾಣಿಯಾದರೆ ಈ ಭವನ ಕಳಕಳಿಸುತ್ತದೆ. ನೀವು ಹೋಗಿ ಮೀನಿನೊಂದಿಗೆ ಹೇಳಿ" ಎಂದಳು.

ಬೆಸ್ತರವನು ತಪ್ತನಾಗಿ "ಎಲೈ ಹೆಣ್ಣೇ, ಇದ್ದುದರಲ್ಲಿ ತೃಪ್ತಿಪಡದೆ ಹೀಗೆ ಅಡಿಗಡಿಗೆ ಹೋಗಿ ಕೊಂದರೆ ಕೊಟ್ಟರೆ ಮೀನಿಗೆ ಕೋಪ ಬರುವುದಿಲ್ಲವೆ?" ಎಂದು ನಾನಾರೀತಿ ಹೆಂಡತಿಗೆ ತಿಳಿಯ ಹೇಳಿದ. ಆದರೆ ಆಕೆ ಮೊಂಡುತನ ಬಿಡಲಿಲ್ಲ. "ಈ ಒಂದು ಸಾರಿ ಮಾತ್ರ ಹೋಗಿಬಿಟ್ಟುಬನ್ನಿ" ಎಂದು ಪ್ರಾರ್ಥಿಸಿದಳು.

"ಏನಾದರಾಗಲೀ, ನಾನು ಹೋಗಲಾರೆ" ಎಂದು ಖಚಿತವಾಗಿ ಹೇಳಿಬಿಟ್ಟ ಬೆಸ್ತ.

"ಸರಿ, ನೀವು ಹೋಗದಿದ್ದರೆ ನಾನೇ ಹೋಗಿ ಮೀನನ್ನು ಕೇಳುತ್ತೇನೆ" ಎಂದು ಹೊರಡಲು ಸಿದ್ಧಳಾದಳು. ಆಗ ಬೆಸ್ತರವನಿಗೆ ಬೇರೇನೂ ದಾರಿ ಕಾಣಿಸಲಿಲ್ಲ. "ನಾನೇ ಹೋಗಿ ಬರುತ್ತೇನೆ" ಎಂದು ಹೇಳಿ ಸಮುದ್ರ ತೀರಕ್ಕೆ ಹೋದ.

ಮೀನನ್ನು ಕೂಗಿದ ಕೂಡಲೇ ಮೀನು ಹೊರಗೆ ಬಂದು ಮಾಮೂಲಿನಂತೆ "ಏನಪ್ಪಾ ಇತ್ತ ಬಂದೆ?" ಎಂದಿತು.

ಅವನು ಭಯಭೀತನಾಗಿ ತೊದಲುತ್ತಾ "ಮೀನೇ, ಮೀನೇ, ತಾನೊಬ್ಬ ರಾಣಿಯಾಗ

ಬೇಕೆಂದು ನನ್ನ ಹೆಂಡತಿ ಕೋರಿಕೊಂಡು ಬರುವಂತೆ ಹೇಳಿದಳು" ಎಂದ.

"ಸರಿ. ಈ ಮಾತ್ರಕ್ಕೆ ಇಷ್ಟು ತೊಂದರೆ ತೆಗೆದುಕೊಂಡು ಬಂದೆಯಾ? ಸರಿ. ಹೋಗು, ನಿನ್ನ ಹೆಂಡತಿ ರಾಣಿಯಾಗಿಬಿಡುವಳು" ಎಂದು ಹೇಳಿ ಮೀನು ನೀರಿನೊಳಕ್ಕೆ ಪಳಕ್ಕನೆ ಮುಳುಗಿಹೋಯಿತು.

ಬೆಸ್ತರವನು ಮನೆಗೆ ಬರುವ ವೇಳೆಗೆ ತನ್ನ ಹೂಮೂಲು ಮನೆಯಿದ್ದ ಸ್ಥಳದಲ್ಲಿ ರಾಜ ಭವನವೊಂದಿತ್ತು. ಆ ಭವನದಲ್ಲಿ ಆಳುಕಾಳು ಗಳು ಓಡಾಡುತ್ತಿದ್ದಾರೆ. ಭವನದ ಸಿಂಹದ್ವಾರ ಬಹಳ ಅದ್ಭುತವಾಗಿದೆ. ಸಿಪಾಯಿಗಳು ಬಿಚ್ಚು ಗತ್ತಿ ಹಿಡಿದು ಕಾವಲು ಕಾಯುತ್ತಿದ್ದಾರೆ. ಬೆಸ್ತರವನು ಬಾಗಿಲ ಹತ್ತಿರ ಹೋಗಿ ನಿಂತು ಚಕಿತನಾಗಿ ನೋಡುತ್ತಿರಲು, ಪರಿಚಾರಿಕೆ ಯರು "ಜಯವಾಗಲೀ, ಮಹಾರಾಜರಿಗೆ, ಜಯವಾಗಲಿ" ಎಂದು ಜಯಧ್ವನಿಯನ್ನು ಮಾಡುತ್ತಾ ಅಲ್ಲಿಗೆ ಬಂದರು. ಆತನನ್ನು ಒಳಕ್ಕೆ ಕರೆದುಕೊಂಡು ಹೋದರು.

ಒಳಗೆ ಹೋಗಿ ನೋಡಿದರೆ ದರ್ಬಾರು ನಡೆಯುತ್ತಿದೆ. ಅಲ್ಲಿ ಗಣ್ಯ ಮಹನೀಯರೆಲ್ಲಾ ಕುಳಿತಿದ್ದಾರೆ. ಸಭಾ ಮಧ್ಯದಲ್ಲಿದ್ದ ಸಿಂಹಾ ಸನದಮೇಲೆ ಬೆಸ್ತರವನ ಹೆಂಡತಿ ಮಹಾರಾಣಿ ಯಾಗಿ ಆಸೀನಳಾಗಿದ್ದಾಳೆ.

ಸಖಿಯರು ನಿಂತು ದೊಡ್ಡ ದೊಡ್ಡ ಚಾಮರಗಳಿಂದ ಆಕೆಗೆ ಗಾಳಿ ಬೀಸುತ್ತಿದ್ದಾರೆ. ಇವುಗಳೆಲ್ಲವನ್ನೂ ನೋಡಿದ ತರುವಾಯ ಬೆಸ್ತರವನು "ಸರಿ, ಈಗ ನೀನು ಕೋರಿ



ಕೊಂಡದ್ದೆಲ್ಲಾ ನೆರವೇರಿತು. ಸಮಸ್ತವಾದ ವೈಭವಗಳನ್ನೂ ಅನುಭವಿಸಿದೆ. ಇನ್ನೇನೂ ಕೋರಿಕೊಳ್ಳುವುದು ಉಳಿದಿಲ್ಲವೆಂದು ತೋರುವುದು" ಎಂದ ಬೇಸರಿಕೆಯಿಂದ ಬೆಸ್ತ.

ಅದಕ್ಕೆ ಆಕೆ "ಎಲ್ಲಿ ಮುಗಿಯಿತು? ನನ್ನ ಕೋರಿಕೆಗಳು ಭೂಲೋಕದಲ್ಲಿ ಒಬ್ಬ ಚಿಕ್ಕ ರಾಣಿಯಾದರೆ ಸಾಕೇ? ಆಕಾಶದಲ್ಲಿರುವ ಸೂರ್ಯಚಂದ್ರರಿಗೆ ರಾಣಿಯಾದರೆ ತಾನೇ ನನ್ನ ಆಕಾಂಕ್ಷೆ ಈಡೇರುತ್ತದೆ" ಎಂದು ಗಂಡನೊಂದಿಗೆ ಹೇಳಿದಳು.

ಆ ಮಾತನ್ನು ಕೇಳಿ ಬೆಸ್ತರವನು ತುಂಬಾ ಚಿಂತಾಮಗ್ನನಾದ. "ಬೇಡ, ನಿನಗಿಂತಹ ಕೋರಿಕೆ ಉಚಿತವಲ್ಲ" ಎಂದು ಬಗೆಬಗೆಯಾಗಿ ಬುದ್ಧಿ ಹೇಳಿ ನೋಡಿದ. ಆದರೆ ಆ ಗಯ್ಯಾಳಿ ಹಠಹಿಡಿದು ಕುಳಿತಳು. ಮತ್ತೇನೂ ಮಾಡಲಾರದೆ "ಸರಿ, ನಿನ್ನ ಕರ್ಮ ಹೇಗಿದೆಯೋ ಹಾಗೇ ಆಗುತ್ತೆ ಯಾರೇನು ಮಾಡುವರು?" ಎಂದುಕೊಳ್ಳುತ್ತಾ ಹೊರಟ.

ಸಮುದ್ರ ತೀರವನ್ನು ಸೇರಿದ ಕೂಡಲೇ ಮೀನನ್ನು ಕರೆದ. ಮೀನು ಹೊರಗೆ ಬಂದು "ಏನಪ್ಪಾ, ಬಂದೆ?" ಎಂದು ಕೇಳಿತು. ಬೆಸ್ತ "ಮೀನೇ, ಮೀನೇ, ನನ್ನ ಹೆಂಡತಿಗೆ ಭೂಲೋಕದಲ್ಲಿ ರಾಣಿಯಾಗಿ ತೃಪ್ತಿಯಿಲ್ಲವಂತೆ, ಆಕಾಶದಲ್ಲಿರುವ ಸೂರ್ಯಚಂದ್ರರಿಗೆ ರಾಣಿಯಾಗಬೇಕೆಂದು ಅವಳ ಹಂಬಲವಂತೆ. ಅದಕ್ಕಾಗಿ ನನ್ನನ್ನು ಕಳುಹಿಸಿದಳು" ಎಂದ.

ಅದಕ್ಕೆ ಮೀನು ನಿಧಾನವಾಗಿ ಹೀಗೆಂದಿತು: "ಓ, ಅಷ್ಟೇತಾನೇ, ಸರಿ. ನಿನ್ನ ಹೆಂಡತಿ ಕೋರಿಕೆ ನೆರವೇರುವುದು. ಆದರೆ ಈ ಜನ್ಮದಲ್ಲಲ್ಲ. ಆದುದರಿಂದ ತನ್ನ ಕೋರಿಕೆಗಳನ್ನೆಲ್ಲಾ ಬಿಟ್ಟು ಪರೋಪಕಾರ ಮಾಡುವಂತೆ ನಿನ್ನ ಹೆಂಡತಿಗೆ ಹೇಳು" ಎಂದು ಬುಳಕ್ಕನೆ ನೀರಿನೊಳಕ್ಕೆ ಮುಳುಗಿತು.

ಬೆಸ್ತರವನು ತನ್ನ ಪಾಳ್ಯವನ್ನು ಮತ್ತೆ ಸೇರಿಕೊಳ್ಳುವ ವೇಳೆಗೆ ದಿವ್ಯ ಭವನವಾಗಲೀ, ಪರಿಚಾರಿಕೆಯರಾಗಲೀ ಕಾಣಿಸಲಿಲ್ಲ. ಆ ಸ್ಥಳದಲ್ಲಿ ಶಿಥಿಲವಾಗಿದ್ದ ತನ್ನ ಹಿಂದಿನ ಜೋಪಡಿ ಕಾಣಿಸಿತು. ಒಳಗೆ ಹೋಗಿ ಇಣಿಕಿ ನೋಡಿದರೆ ಕಣ್ಣೀರು ಧಾರಾಕಾರವಾಗಿ ಸುರಿಸುತ್ತಿರುವ ತನ್ನ ಸತಿ ಕಾಣಿಸಿದಳು.



## ಗಡ್ಡದ ಪಿಶಾಚಿ

ಒಮ್ಮೆ ಗಡ್ಡದ ಸಾಧುವೊಬ್ಬನು ಒಂದು ಹಳೇ ಮನೆಯ ಜಗಲಿಯಲ್ಲಿ ರಾತ್ರಿ ಮಲಗಿದ್ದ. ಆಗ ರಾತ್ರಿ ಏನೋ ಒಂದು ಕೆಟ್ಟ ಕನಸು ಬಿತ್ತು. ಕನಸಿನಲ್ಲಿ ಗಡ್ಡದ ಪಿಶಾಚಿಯೇ ಕಾಣಿಸಿಕೊಳ್ಳಬೇಕೆ? ಸಾಧು ಬಹಳ ಚುರುಕು! ಕೂಡಲೇ ಆ ಪಿಶಾಚಿಯ ಗಡ್ಡ ಹಿಡಿದುಬಿಟ್ಟ. "ಎಲವೊ! ನಿನ್ನಿಂದ ಎಷ್ಟು ತೊಂದರೆ ಪ್ರಪಂಚಕ್ಕೆ! ಪಾಪಿ! ನಿನಗೆ ತಕ್ಕಶಾಸ್ತಿ ಮಾಡುತ್ತೇನೆ. ಓಡಬೇಡ. ನಿಲ್ಲು!" ಎಂದು ಗದರಿಸುತ್ತ ಫಟಾರನೆ ಪಿಶಾಚಿಯ ಕಪಾಳಕ್ಕೆ ಹೊಡೆದ. ಹೊಡೆದ ರಭಸಕ್ಕೆ ಪಿಶಾಚಿಯ ಹಲ್ಲು ಉದುರಿತು! ರಕ್ತದಿಂದ ಅದರ ಬಾಯಿಯೆಲ್ಲಾ ಕೆಂಪಾಯಿತು!

ಈ ದೃಶ್ಯವನ್ನು ಕಂಡು ಕನಸೇ ಮಾಯವಾಗಿತ್ತು! ಎಚ್ಚರಕ್ಕೆ ಬಂದಾಗ ನೋಡುತ್ತಾನೆ-ತನ್ನ ಗಡ್ಡ ತನ್ನ ಎಡಮುಷ್ಟಿಯೊಳಗಿದೆ. ತನ್ನ ಬಲದವಡೆ ಹಲ್ಲುಕೂಡಾ ಬಲವಾಗಿ ನೋಯುತ್ತಿದೆ! ಮಾತ್ರವಲ್ಲ ದವಡೆ ಹಲ್ಲುಕೂಡಾ ಉದುರಿಹೋಗಿದೆ! ತನ್ನ ಬಾಯಿಯೆಲ್ಲಾ ರಕ್ತವಾಗಿದೆ! ಅಯ್ಯಯ್ಯೊ! ತಾನೇ ತನ್ನ ಕಪಾಳಕ್ಕೆ ಹೊಡೆದುಕೊಂಡೆನೇ, ಪಿಶಾಚಿಯೇ ತನಗೆ ಹೊಡೆಯಿತೋ ಎಂಬುದು ಇನ್ನೂ ಅವನಿಗೆ ಗೊತ್ತಾಗಿಲ್ಲ!

—ಯಂ. ಯಚ್. ಶಂಕರನಾರಾಯಣ

---

## ಕಿವುಡನೇ ?

ಶ್ರೀಮಂತ ಸುಗುಣಾಕರನು ಫಸ್ಟ್‌ಕ್ಲಾಸ್ ರೈಲು ಡಬ್ಬಿಯಲ್ಲಿ ಪ್ರಯಾಣ ಮಾಡುತ್ತಿದ್ದನು. ಅದೇ ಕಂಪಾರ್ಟ್‌ಮೆಂಟಿನಲ್ಲಿ ಒಬ್ಬಳು ತರುಣಿಯಿದ್ದಳು. ಅವಳು ಸುಗುಣಾಕರನ ಬಳಿಯಲ್ಲಿ ತುಂಬಾ ಹಣವಿರುವುದನ್ನು ಅರಿತು ಅದನ್ನು ದೋಚಿಕೊಳ್ಳಲು ಒಂದು ಉಪಾಯ ಮಾಡಿದಳು. "ಎಲೈ ತರುಣ, ನಿನ್ನ ಹಣವನ್ನೆಲ್ಲ ನನಗೆ ಕೊಡು. ಇಲ್ಲದಿದ್ದರೆ ಅಪಾಯ ಸಂಕಲೆಯೆಳೆದು ಈತನು ನನ್ನ ಚಿನ್ನವನ್ನು ಕದಿಯಲು ಕೈಹಾಕುತ್ತಿದ್ದಾನೆ ಎಂದು ಹೇಳುತ್ತೇನೆ" ಎಂದುಬೆದರಿಕೆ ಹಾಕಿದಳು ಗಂಡುಬೀರಿಯಂತೆ!

ಸುಗುಣಾಕರನಿಗೆ ಆ ಮಾತು ಕೇಳಿಸಿದಂತೆ ತೋರಲಿಲ್ಲ. ಅವಳು ಮತ್ತೊಮ್ಮೆ ಅದನ್ನೇ ಹೇಳಿದಳು. ಆಗ ಅವನು "ಅಮ್ಮಾ, ನೀವು ಏನು ಹೇಳುವಿರೋ ನನಗೆ ಕೇಳುವುದಿಲ್ಲ. ನಾನು ಹುಟ್ಟಾರೆ ಕಿವುಡ. ನಾನೇನಾದರೂ ತಪ್ಪು ಮಾಡಿದೆನೆಂದು ನನ್ನನ್ನು ಬಯ್ಯುವಿರಾ? ಏನು ಮಾಡಿದೆ?" ಎಂದ. ಮತ್ತೆ ಅವಳು ಅವನ ಕಿವಿಯ ಬಳಿಯಲ್ಲಿ ಬಂದು ಗಟ್ಟಿಯಾಗಿ ಹೇಳಿದಳು. "ಊಹುಂ. ನಿಮ್ಮ ಅಭಿಪ್ರಾಯವೇನೋ ಬರೆದು ತೋರಿಸಿ" ಎಂದು ಸುಗುಣಾಕರನು ತನ್ನ ಕಿಸೆಯಿಂದಲೇ ಒಂದು ಖಾಲೀ ಕಾಗದ ಅವಳಿಗೆ ಕೊಟ್ಟ. ಅವಳು ಬರೆದು ಕೊಟ್ಟಳು. ಅವನು ಅದನ್ನು ದೀಪದ ಬೆಳಕಿಗೆ ಹಿಡಿದು ಮೆಲ್ಲನೆ ಓದಿ ತಲೆದೂಗುತ್ತಾ "ಸರಿ. ಸ್ಟೇಷನ್ ಸಮೀಪ ಬಂತಲ್ಲ. ಆಮೇಲೆ ನಿಮ್ಮ ಕೋರಿಕೆ ಈಡೇರಿಸುವೆ" ಎಂದ.

ಆಗಲೇ ಸ್ಟೇಶನ್ ಬಂತು. ಸುಗುಣಾಕರನು ಕೂಡಲೇ ರೈಲ್ವೇ ಪೋಲೀಸರನ್ನು ಕರೆದು, ಅವಳು ಬರೆದುಕೊಟ್ಟ ಪತ್ರವನ್ನೂ ಆ ಹೆಂಗುಸನ್ನೂ ಪೋಲೀಸರ ವಶಮಾಡಿದ. ಅವನು ನಿಜವಾಗಿಯೂ ಕಿವುಡನೇ?

—ಗೋವಿಂದ, ವಿ. ದೇಶಪಾಂಡೆ








# ಆಕಸ್ಮಿಕ

ರಾಮು ಸಾಧು ಹುಡುಗ; ಭೀಮು ದುಷ್ಟ ಹುಡುಗ. ಭೀಮು ರಾಮುನ ಸ್ನೇಹ ಮಾಡಿಕೊಂಡು ಅವನಿಗೂ ತನ್ನ ಕೆಟ್ಟತನವನ್ನು ಕಲಿಸಲೆತ್ನಿಸುತ್ತಿದ್ದ. ಭೀಮುವೊಡನೆ ಸೇರಬೇಡವೆಂದು ಅವನ ತಾಯಿ ಹೇಳುತ್ತಿದ್ದಳು. ಆದರೂ ಅವನನ್ನು ಹೋಗೆನ್ನಲು ರಾಮುನಿಗೆ ದಾಕ್ಷಿಣ್ಯ.

ಒಂದುದಿನ ಮಧ್ಯಾಹ್ನ ರಾಮುನ ತಾಯಿ ನಿದ್ದೆಯಲ್ಲಿರುವಾಗ ಭೀಮು ಬಂದ. ಹೊಟ್ಟೆಬಾಕನಾದ ಅವನು ರಾಮುವನ್ನು ಕುರಿತು "ನನಗೆ ಒಂದಿನಾದರೂ ನೀನು ಕಾಫೀ ಕೊಟ್ಟಿದ್ದ್ಯಾ? ಈಗ ಕೊಡು" ಎಂದ.

"ಅಯ್ಯೋ! ನನ್ನಮ್ಮ ನಿನ್ನನ್ನು ಸೇರಿಸಿಕೋಬೇಡ ಅಂದರೆ ಕಾಫಿ ಕೇಳ್ತೀಯಾ?" ಎಂದ ರಾಮು. "ಅಮ್ಮನಿಗೆ ಹೆದರುತ್ತೀಯಾ ಪುಕ್ಕ? ಈಗ ನಿನ್ನ ತಾಯಿ ನಿದ್ದೆಯಲ್ಲಿದ್ದಾರೆ ತಾನೆ? ನಾಲ್ಕು ಗಂಟೆಯ ಮೊದಲು ಅವರು ಏಳುವುದೂ ಇಲ್ಲ. ಅಪ್ಪನೂ ಮನೆಯಲ್ಲಿಲ್ಲ. ನೀನು ತಾಯಿಗೆ ಗೊತ್ತಾಗದ ಹಾಗೆ ಸಕ್ರೆ ಹಾಲು ತೆಗೆದುಕೊಂಡು ಬಾ. ಐದೇ ನಿಮಿಷದಲ್ಲಿ ಕಾಫಿಯಾಗುತ್ತದೆ. ದುಡ್ಡು ಸಿಕ್ಕಿದರೆ ಇಬ್ಬರೂ ಹೋಟ್ಲಿಗೆ ಹೋಗಿ ಕುಡಿದುಬಿಡಬಹುದು" ಎಂದು ಬೋಧೆಮಾಡಿದ.

ಕೆಟ್ಟ ಬೆಕ್ಕಿನ ಉಪದ್ರವಕ್ಕೆ ಹಾಲು ಸಕ್ರೆ ಮೊದಲಾದುವನ್ನು ಬೀರೋದೊಳಗೆ

"ಸುಂದರಿ"

ಇಟ್ಟಿದ್ದಳು ರಾಮೂನ ಅಮ್ಮ. ರಾಮು ಬೆಕ್ಕಿನ ಹಜ್ಜೆಯಿಂದ ಬೀರೋ ತೆರೆದು ನೋಡಿದಾಗ ನಾಲ್ಕಾಣೆ ಸಿಕ್ಕಿತು. "ಅದು ರೊಟ್ಟಿಗಾಯಿತು. ಹಾಲೂ ಸಕ್ರೆ ತೆಗಿ" ಎಂದು ಸನ್ನೆ ಮಾಡಿದ ಭೀಮು.

ಇಬ್ಬರೂ ಸದ್ದಿಲ್ಲದೆ ಅಡುಗೇ ಮನೆಗೆ ಹೋದರು. ಭೀಮು ಒಲೆಗಷ್ಟು ಚಿಮಿಣೆ ಎಣ್ಣೆ ಸುರಿದ; ಬೆಂಕಿ ಹಚ್ಚಿದ; ನೀರಿಟ್ಟು ಕುದಿಸಿ ಕಾಫೀ ಪುಡಿ ಹಾಕಿ ಕೆಳಗಿಳಿಸಿದ. ನಂತರ ರೊಟ್ಟಿ ತರಲಿಕ್ಕಾಗಿ ಇಬ್ಬರೂ ಹೊರಗೆ ಹೋದರು.

ಆ ನಾಲ್ಕಾಣೆ ಖೋಟಾ ಪಾವಲಿ, ನಡೆಯಲಿಲ್ಲ. ವ್ಯಸನವಾಯಿತು ರಾಮೂಗಿಂತ ಹೆಚ್ಚು ಭೀಮುಗೆ. ಬರಿಗೈಯಿಂದ ಮನೆಗೆ ಬಂದರು. ಬಂದು ನೋಡಿದರೆ ಹಾಲನ್ನು ಕಂಟಬೆಕ್ಕು ಉರುಳಿಸಿ ಹಾಕಿತ್ತು. ಸಿಟ್ಟಿನಿಂದ ರಾಮು ಕಟ್ಟಿಗೆ ಕೋಲೊಂದನ್ನು ತೆಗೆದು, ಓಡುತಿರುವ ಆ ಬೆಕ್ಕಿನ ಮೇಲೆ ಬಿಸುಟ.

ಆಗಲೇ ಅಕಸ್ಮಾತ್ತಾಗಿ ಒಳಗೆ ಬರುತ್ತಿದ್ದ ಅವನ ತಂದೆಯ ಮೈಮೇಲೆಯೇ ಬಿತ್ತು ಆ ಕಟ್ಟಿಗೆ ಕೋಲು. ಅವರು ನಡೆದ ಕತೆಯನ್ನೆಲ್ಲಾ ನೋಡಿ ಸಿಟ್ಟಿನಿಂದ ರಾಮೂನ ಕಿವಿಯನ್ನು ಚೆನ್ನಾಗಿ ಹಿಂಡಿದರು. ಇಷ್ಟರಲ್ಲಿ ಭೀಮು ತಪ್ಪಿಸಿಕೊಂಡು ಓಡಿಯೇಬಿಟ್ಟಿದ್ದ!







## ಮು ಖ ಚಿ ತ್ರ

ಶಸ್ತ್ರಾಸ್ತ್ರಗಳನ್ನು ತರಲಿಕ್ಕಾಗಿ ಹೋದ ಅರ್ಜುನನು ಬಹುದಿನಗಳಾದರೂ ಬಾರದಿರುವುದನ್ನು ನೋಡಿ, ಧರ್ಮರಾಯನು ಚಿಂತೆಗೀಡಾದನು. ಆಗ ಬೃಹದಶ್ವನೆಂಬ ಋಷಿ ಅವನ ಚಿಂತೆಯನ್ನು ನಿವಾರಿಸಲಿಕ್ಕಾಗಿ ನಳೋಪಾಖ್ಯಾನವನ್ನು ಹೇಳಿದನು.

ನಳನು ನಿಷಧದೇಶದ ರಾಜ. ವಿದರ್ಭದೇಶದ ಭೀಮರಾಜನ ಕುಮಾರಿ ದಮಯಂತಿ ಸ್ವಯಂವರದಿಂದ ಅವನನ್ನು ವರಿಸಿದ್ದಳು. ನಳನು ಧರ್ಮಾಚಾರಗಳನ್ನು ತಪ್ಪದೆ ಪಾಲಿಸುತ್ತಿದ್ದುದರಿಂದ ಕಲಿಪುರುಷ ಅವನೊಂದಿಗೆ ಪಂಥಕಟ್ಟಿದ. ಒಂದು ದಿನ ನಳನು ಸ್ವಲ್ಪಮಾತ್ರ ಆಚಾರ ಮರೆತವೇಳೆ ನೋಡಿ ಅವನನ್ನು ಹಿಡಿದುಕೊಂಡ. ನಂತರ ನಳನು ಕಲಿಪ್ರೇರಣೆ ಯಿಂದ, ಬಂಧುವಾದ ಪುಷ್ಕರನೊಂದಿಗೆ ಜೂಜಾಡಿ ಪೂರಾ ಸೋತು, ದಮಯಂತಿಯೊಂದಿಗೆ ಕಾಡಿಗೆ ಹೋದ. ಅಲ್ಲಿ ಹಸಿವೆಯನ್ನು ತಾಳಲಾರದೆ, ಪುಟ್ಟ ಹಕ್ಕಿಗಳನ್ನು ಹಿಡಿಯಲಿಕ್ಕಾಗಿ ಬಟ್ಟೆಯನ್ನು ಅವುಗಳ ಮೇಲೆ ಬೀಸಿದ. ಅವು ಅವನ ಬಟ್ಟೆಯನ್ನೇ ಹಾರಿಸಿಕೊಂಡು ಹೋದುವು. ಹೀಗೆ ಕಾಡು ಕಾಡು ತಿರುಗುತ್ತ ದಣಿದು ಒಂದೆಡೆ ಮಲಗಿದರು. ದಮಯಂತಿಗೆ ಗಾಢನಿದ್ರೆ. ನಳನಿಗೆ ಅವಳ ಕಷ್ಟ ನೋಡಲಾಗದೆ ಹೋಯಿತು. ಅವಳ ಸೆರಗನ್ನೇ ಹರಿದು ತಾನುಟ್ಟುಕೊಂಡು ಅವಳನ್ನು ಬಿಟ್ಟು ಓಡಿಹೋದ.

ಆಗ ಕಾಡುಗಿಚ್ಚಿನಲ್ಲಿ ಸಿಕ್ಕಿಬಿದ್ದ ಕಾರ್ಕೋಟಕವು ತನ್ನನ್ನು ಕಾಪಾಡಿದರೆ ಪ್ರತ್ಯುಪಕಾರ ಮಾಡುವೆನೆಂದು ಮೊರೆಯಿಟ್ಟಿತು. ನಳ ಕನಿಕರದಿಂದ ಕಾರ್ಕೋಟಕವನ್ನು ಎತ್ತಿ ಅತ್ತ ಹಾಕಿದನು. ಕೂಡಲೇ ಕಾರ್ಕೋಟಕವು ನಳನನ್ನು ಕಡಿದು ಕುರೂಪಮಾಡಿ, "ಇದರಿಂದ ನಿನಗೆ ಒಳ್ಳೆಯದಾಗುವುದು" ಎಂದು ಹೇಳಿ ಹೊರಟು ಹೋಯಿತು. ನಂತರ ನಳನು ಅಯೋಧ್ಯೆಯ ಋತುಪರ್ಣ ರಾಜನಲ್ಲಿ ಸುಬಾಹುವೆಂಬ ಹೆಸರಿನಿಂದ್ದ ಅಶ್ವಪಾಲಕನಾಗಿದ್ದ.

ಅತ್ತ ದಮಯಂತಿ ಎಚ್ಚತ್ತು ಪತಿಯನ್ನು ಕಾಣದೆ ಬಹಳ ಕಷ್ಟಪಟ್ಟು ಕಡೆಗೆ ಚೇದಿರಾಣಿಯಬಳಿ ಸೈರಂಧ್ರಿಯಾಗಿ ಕೆಲಸಕ್ಕೆ ಸೇರಿದಳು. ಅವಳ ತಂದೆ ಭೀಮರಾಜನು ಅವಳನ್ನು ಹುಡುಕಿಸಿ ತನ್ನಲ್ಲಿ ಕರೆಸಿಕೊಂಡನು. ದಮಯಂತಿ ಪತಿಯನ್ನು ಹುಡುಕಿಸಲು ತನಗೆ ಮತ್ತೊಮ್ಮೆ ಸ್ವಯಂವರವೆಂದು ಪ್ರಕಟ ಮಾಡಿಸಿದಳು. ಇದನ್ನು ಕೇಳಿ ಸುಬಾಹು ನಾಮಕನಾದ ನಳನು ಅಲ್ಲಿಗೆ ಹೋಗಿ ಸೇರಿದ. ಬಹಳ ಚಮತ್ಕಾರವಾಗಿ ಪತಿಪತ್ನಿಯರ ಸಮಾಗಮವಾಯಿತು. ಕಲಿಪುರುಷ ಸೋತು ನಳನನ್ನು ಬಿಟ್ಟು ತೊಲಗಿದ. ನಳದಮಯಂತಿಯರು ಮತ್ತೆ ಅರಸರಾಗಿ ಇಮ್ಮಡಿ ಕೀರ್ತಿಶಾಲಿಗಳಾಗಿ ರಾಜ್ಯವಾಳಿದರು.



# ಔದಾರ್ಯ



ಕೃಷ್ಣಾನದಿ ತೀರದಲ್ಲಿ ಒಂದು ಮನೆಯಿತ್ತು. ಅಷ್ಟೇನೂ ದೊಡ್ಡದಲ್ಲ ಆ ಮನೆ. ಆದರೂ ಬಹಳ ಸೌಕರ್ಯವಾಗಿ ಅಚ್ಚುಕಟ್ಟಾಗಿ, ನೋಡಲು ತುಂಬಾ ಚೆಲುವಾಗಿ, ಮುದ್ದಾಗಿ ಇತ್ತು. ಅದರಲ್ಲಿ ವಾಸಿಸುತ್ತಿದ್ದ ದಂಪತಿಗಳಿಗೆ ಒಂದುಸಾರಿ ಅವಳಿ ಮಕ್ಕಳಾದವು. ಇಬ್ಬರೂ ಗಂಡುಮಕ್ಕಳೇ!

ಮಕ್ಕಳು ಜನಿಸಿದ ಕೆಲವಾರು ದಿನಗಳಲ್ಲೇ ತಂದೆ ತೀರಿಕೊಂಡನು.ಆದುದರಿಂದ ಮನೆಯ ಜವಾಬ್ದಾರಿಯೆಲ್ಲಾ ಹೆಂಡತಿ ಕೃಷ್ಣವೇಣಿಯ ದಾಯಿತು. ಅಷ್ಟೋ ಇಷ್ಟೋ ಇದ್ದವರಾದು ದರಿಂದ ಕಾಲಕ್ಷೇಪಕ್ಕೆ ತೊಂದರೆ ಇರಲಿಲ್ಲ. ಆದರೆ ಆಕೆಗೆ ವಯಸ್ಸಾದಂತೆಲ್ಲಾ, ಸಂಸಾರ ಸಾಗಿಸುವುದು ಕಷ್ಟಕರವಾಗಿ ತೋರಿತು.

ಇನ್ನು ಆ ಅವಳಿಮಕ್ಕಳ ವಿಚಾರ. ನೋಡಲು ಇಬ್ಬರೂ ಒಂದೇ ಅಚ್ಚಿನಲ್ಲಿ ಎರಕ ಹೊಯ್ದ ಬೊಂಬೆಗಳಂತೆ ಕಾಣಿಸುತ್ತಿದ್ದರು. ಅವರಿಗೆ ರಾಮಲಕ್ಷ್ಮಣ ಎಂದು ತಂದೆ ತಾಯಿ ಗಳು ಹೆಸರಿಟ್ಟರು. ಒಳ್ಳೆಯ ಹೆಸರು ತಾನೆ? ಆದರೆ ಇವರಿಬ್ಬರ ರೂಪು ಒಂದೇ ರೀತಿ ಯಿದ್ದರೂ ದೊಡ್ಡವರಾಗುತ್ತಾ ಬಂದಂತೆ ಅವರ ಗುಣಗಳಲ್ಲಿ ತುಂಬಾ ವ್ಯತ್ಯಾಸ ವಿರು ವುದು ಕಂಡುಬಂತು.

ರಾಮು ಸೋಮಾರಿ; ದುರ್ಮಾರ್ಗ. ಲಕ್ಷ್ಮಣ ಊರಿನೊಳಗಿರುವ ಎಲ್ಲರೊಂದಿಗೆ ಸಲುಗೆಯಿಂದ ವರ್ತಿಸಿ, ಎಲ್ಲರ ಆದರಾಭಿ ಮಾನಗಳನ್ನೂ ಪಡೆದಿದ್ದ.

ರಾಮು ಪುಂಡನಾಗಿ ತಯಾರಾದ. ಒಡ ಹುಟ್ಟಿದ ತಮ್ಮ ಲಕ್ಷ್ಮಣನಿಗೆ ನಾನಾ ರೀತಿ ಹಿಂಸೆ ಕೊಡುತ್ತಿದ್ದ. ಆದರೂ ಲಕ್ಷ್ಮಣನಿಗೆ ಅಣ್ಣನೆಂದರೆ ಅಭಿಮಾನ.

ರಾಮು ಹನ್ನೆರಡು ವರ್ಷದವನಾದ. ಒಂದು ದಿನ ತಮ್ಮನೊಂದಿಗೆ ಜಗಳವಾಡಿ ಅವನನ್ನು ಚೆನ್ನಾಗಿ ಹೊಡೆದ. ಬಲಾಢ್ಯ ನಾದುದರಿಂದ ಲಕ್ಷ್ಮಣನನ್ನು ಮನೆಯಿಂದ ಹೊರಗೂ ಅಟ್ಟಿಬಿಟ್ಟ.

ತಾಯಿ ಮನದಲ್ಲಿ ಕೊರಗಿದಳೇ ಹೊರತು, ಹಿರಿಯವನಿಗೆ ಏನೂ ಹೇಳಲಿಲ್ಲ. "ಅಮ್ಮಾ. ನೀನೇನೂ ಚಿಂತಿಸಬೇಡ. ಕಾಲ ಯಾವಾ ಗಲೂ ಒಂದೇ ರೀತಿ ಇರಲಾರದು. ನಮಗೂ

ಪದ್ಮಾ ಗುರುರಾಜ



ಒಳ್ಳೆ ದಿನಗಳು ಬರುತ್ತವೆ" ಎಂದು ತಾಯಿಗೆ ಸಮಾಧಾನ ಹೇಳಿ, ಆಕೆಯ ಆಶೀರ್ವಾದ ಪಡೆದು, ಲಕ್ಷ್ಮಣನು ಮನೆ ಬಿಟ್ಟು ಎಲ್ಲಿಗೋ ಹೊರಟು ಹೋದ.

ಪುಂಡರಾಮುಗೆ ಕೆಲವು ದಿನಗಳಿಗೆಲ್ಲಾ ಮದುವೆ ಆಯಿತು. ಅವನ ಹೆಂಡತಿ ಗಯ್ಯಾಳಿ. ಮೂರ್ಖಳು. ಅತ್ತೆ ಸೊಸೆಯರ ನಡುವೆ ಸದಾ ಜಗಳ; ತಗಾದೆ. ಮನೆ ಯಜಮಾನನಾದ ರಾಮು ಹೆಂಡತಿ ಹೇಳಿದಂತೆ ಕುಣಿಯುತ್ತಿದ್ದ. ಗಂಡ ತುಸ ಸಲುಗೆ ಕೊಟ್ಟಿದ್ದುದರಿಂದ ರಾಮು ಪತ್ನಿ ಕೃಷ್ಣವೇಣಿಗೆ ನಾನಾ ಯಾತನೆಗಳನ್ನೂ ಕೊಡುತ್ತಿದ್ದಳು. ಮನೆಗೆ ಬಂದ ಸೊಸೆಯದು ಆಡಿದ್ದೇ ಆಟ; ಹಾಡಿದ್ದೇ ಹಾಡು. ಕೃಷ್ಣವೇಣಿಗೆ ಇವೆಲ್ಲಾ ಹಿಡಿಸಲಿಲ್ಲ. ಸರಿ, ಇಬ್ಬರ ನಡುವೆ ಮನಸ್ತಾಪಗಳು ಮತ್ತಷ್ಟು ಹೆಚ್ಚಿತು.

ರಾಮು ಹೆಂಡತಿಯ ಮರಳುಮಾತುಗಳನ್ನು ಕೇಳಿ ತನ್ನ ತಾಯಿಯನ್ನೂ ಮನೆಯಿಂದ ಹೊರಗೆ ಅಟ್ಟಿದ.

"ಅಯ್ಯೋ, ನನ್ನ ಹಣೇಬರಹವೇ, ಅಷ್ಟು ಚೆನ್ನಾಗಿ ಬಾಳಿದ ನನಗೆ ಇಂತಹ ಅವಸ್ಥೆ ಒದಗಿತಲ್ಲಾ" ಎಂದು ಅನೇಕ ವಿಧವಾಗಿ ಪರಿತಪಿಸಿದಳು ಆಕೆ. ಆವೇದನೆಯಿಂದಲೇ ಆಕೆ ಸವೆದುಸೊರಗಿ ಹೋದಳು. ಮನೆ ಮಠವಿಲ್ಲದೆ ರಸ್ತೆಯಲ್ಲಿ ಅಲೆದಾಡುವ ದುಸ್ಥಿತಿ ಅವಳಿಗೆ ಒದಗಿತು.

ಮನೆ ಬಿಟ್ಟು ಹೋದ ಲಕ್ಷ್ಮಣನು ಕಾಲೆಳೆದುಕೊಂಡು ಹಾಗೇ ಹೋಗುತ್ತಿದ್ದ. ಒಂದು ಅಡವಿಯಲ್ಲಿ ದರೋಡೆಕಾರರು ಸಿಕ್ಕಿದರು. ಅವರು ಲಕ್ಷ್ಮಣನನ್ನು ತಮ್ಮ ನಾಯಕನಾಗಿರುವಂತೆ ಬೇಡಿಕೊಂಡರು. ಅವನು ಇದು ದೈವಾಜ್ಞೆಯಂತೆ ಭಾವಿಸಿ, ಅವರ ಗುಂಪಿನ ನಾಯಕನಾದ. ಆದರೆ ಅವನು ತನ್ನ ಒಳ್ಳೆಯ ನಡತೆಗೆ ತಿಲೋದಕ ಬಿಡಲಿಲ್ಲ!

ಹೀಗೆ ಅವರ ನಾಯಕನಾಗುವುದರಲ್ಲಿ ಲಕ್ಷ್ಮಣನ ಉದ್ದೇಶವೇ ಬೇರೆಯಿತ್ತು. ಈ ಗುಂಪಿನವರೊಂದಿಗೆ ಸೇರಿ, ಅವರ ಸಹಾಯದಿಂದ ತನ್ನ ಅಣ್ಣನನ್ನು ಒಳ್ಳೆಯ ದಾರಿಗೆ ತರಬಹುದೆಂದು ಅವನು ಯೋಚಿಸಿದ್ದ. ಲಕ್ಷ್ಮಣನಿಗೆ ಈಗ ಸದವಕಾಶ ಒದಗಿತು.

ಜನಬಲ ಸೇರಿತು. ವಾಸಸ್ಥಳ ದೊರೆಯಿತು. ಧೈರ್ಯಸ್ಥೈರ್ಯಗಳು ಒಂದವು.

ಶಿಷ್ಯರಮೂಲಕ ಊರಿನಲ್ಲಿದ್ದ ತಮ್ಮ ಮನೆಯ ವಿಷಯಗಳೆಲ್ಲವನ್ನೂ ಆಗಾಗ್ಗೆ ಕೇಳಿ ತಿಳಿದುಕೊಳ್ಳುತ್ತಿದ್ದ. ಕ್ರಮೇಣ ತನ್ನ ತಾಯಿಗಾದ ಗತಿ ತಿಳಿಯಿತು. ಕೂಡಲೇ ಲಕ್ಷ್ಮಣನು ಆಕೆಯನ್ನು ತನ್ನ ಹತ್ತಿರಕ್ಕೆ ಕರೆಯಿಸಿಕೊಂಡು ಆಕೆ ಸುಖವಾಗಿರಲು ಎಲ್ಲ ಅನುಕೂಲಗಳನ್ನೂ ಮಾಡಿಕೊಟ್ಟ.

ಅತ್ತ ಮನೆಯಲ್ಲಿ ಲಕ್ಷ್ಮಣನ ಅತ್ತಿಗೆಯದೇ ಎಲ್ಲಾ ಪಾರುಪತ್ಯ. ರಾಮು ಹೆಂಡತಿಯ ಮಾತಿಗೆ ಪ್ರತಿಹೇಳುತ್ತಿರಲಿಲ್ಲ. ಆಕೆಯ ಗುಲಾಮನಾಗಿ ನಡೆದುಕೊಳ್ಳುತ್ತಿದ್ದ.

ಆ ದಂಪತಿಗಳ ಮಧ್ಯೆ ಒಂದು ಜಗಳ ತಂದಿಟ್ಟುಹೊರತು, ಅವರವರಲ್ಲಿ ಮನಸ್ತಾಪ ಬರಲು ಸಾಧ್ಯವಿಲ್ಲವೆಂದು ಅರಿತುಕೊಂಡ ಲಕ್ಷ್ಮಣ. ಆದರೆ ಅಣ್ಣನಿಗೆ ಅಪಕಾರ ಮಾಡಲು ಲಕ್ಷ್ಮಣನಿಗೆ ಇಷ್ಟವಿಲ್ಲ. ಅಣ್ಣನಿಗೆ ತೊಂದರೆಯಾಗಕೂಡದು. ಆದರೆ ಅವನಿಗೆ ಬುದ್ಧಿಬರುವಂತೆ ಮಾಡಲೇಬೇಕು. ಇದು ಲಕ್ಷ್ಮಣನ ಅಪೇಕ್ಷೆ.

ಆ ಕಳ್ಳರೇನೂ ಸಾಮಾನ್ಯರಲ್ಲ. ಅತಿ ಚತುರರು. ಲಕ್ಷ್ಮಣನು ಅವರನ್ನು ಊರಿನಲ್ಲಿದ್ದ ತಮ್ಮ ಮನೆಗೆ ಕಳುಹಿಸಿ, ಹಿತ್ತಲಲ್ಲಿ ಕಟ್ಟಿಹಾಕಿದ್ದ ಹಸುವನ್ನು ತಾನಿರುವಲ್ಲಿಗೆ ತರಿಸಿಕೊಂಡ. ಆ ಹಸುವಿನ ಹಾಲನ್ನು ತಾಯಿಗೇ ವಿಾಸಲಿಡಿಸಿದ.



ಮಾರನೇಯ ದಿನ ರಾಮುನ ಮನೆಯಲ್ಲಿ ಗಡಿಬಿಡಿಯೆದ್ದಿತು. ಹಿತ್ತಲಲ್ಲಿ ಹಸು ಕಾಣಿಸದಿರಲು ರಾಮು ಹೆಂಡತಿಯನ್ನು ಪ್ರಶ್ನಿಸಿದ. "ನನಗೇನೂ ತಿಳಿಯದು" ಎಂದಳಾಕೆ. ಇಬ್ಬರಿಗೂ ಕಲಹವೇರ್ಪಟ್ಟಿತು. ಅವಳು ಮಾತಾಡದೆ ಅಡಗಿಕುಳಿತಳು. ಅವನು ಹುಡುಕಿ ತನ್ನ ಕೋಪ ತೀರಿಸಿಕೊಂಡ.

ಲಕ್ಷ್ಮಣನಿಗೆ ಈ ರೀತಿ ನಡೆಯುವುದೆಂದು ಮೊದಲೇ ತಿಳಿದಿತ್ತು. ಆತನು ನೆನೆಸಿದ್ದಂತೆಯೇ ನಡೆಯಿತು. ಇದೆಲ್ಲಾ ಗಮನಿಸುತ್ತಿದ್ದ ಅವನು ಇಷ್ಟಕ್ಕೇ ಸುಮ್ಮನಾಗಲಿಲ್ಲ. ಮತ್ತೊಂದು ತಂತ್ರಮಾಡಿದ. ಮತ್ತೆ ಕೆಲವು ದಿನಗಳಿಗೆಲ್ಲಾ ಇನ್ನೊಂದು ವಿಚಿತ್ರ ನಡೆಯಿತು. ರಾಮು



ಕಳಿಸಿಕೊಟ್ಟಿರುವ ಸೀರೆಕುಪ್ಪಸುಗಳು" ಎಂದು ಅವುಗಳೆಲ್ಲವನ್ನೂ ತೋರಿಸಲು ಪ್ರಾರಂಭಿಸಿದಳು.

ನೆರೆಹೊರೆಯ ಹೆಂಗಸರು ಈ ವಿಷಯ ವನ್ನು ತಮ್ಮ ತಮ್ಮ ಗಂಡಂದಿರೊಂದಿಗೆ ಹೇಳಿದರು. ಕೆಲವು ದಿನಗಳಿಗೆಲ್ಲಾ ರಾಮು ಸೀರೆಗಳನ್ನು ಕಳ್ಳತನ ಮಾಡಿ ತನ್ನ ಹೆಂಡತಿಗೆ ಕೊಡುತ್ತಿರುವನೆಂದು ಪುಕಾರೆದ್ದಿತು.

"ಕಳ್ಳಮಾಲೆಲ್ಲಾ ರಾಮು ಮನೆಯಲ್ಲಿ ಸಿಗುತ್ತದೆ. ಬೇಕಾದರೆ ಹೋಗಿ ನೋಡಿ" ಎಂದರು ಕೆಲವರು. ಗ್ರಾಮಸ್ಥರೆಲ್ಲಾ ರಾಮುವಿನ ಮನೆಗೆ ಹೋದರು.

ಹೀಗೆ ಜನ ಗುಂಪುಗೂಡಿ ಬಂದುದನ್ನು ಕಂಡು ಆಗ ತಾನೇ ಮನೆಗೆ ಬರುತ್ತಿದ್ದ ರಾಮು ಶಕ್ತಿಮೀರಿ ಅವರನ್ನು ಆಟಕಾಯಿಸಿದ. "ನೀನು ಕಳ್ಳ. ಭಾರಿ ಕಳ್ಳ. ಇಲ್ಲದಿದ್ದರೆ ನಮಗೆ ಹೀಗೆ ಅಡ್ಡಿ ಮಾಡುತ್ತಿರಲಿಲ್ಲ" ಎಂದು ಅವರೆಲ್ಲಾ ದಬಾಯಿಸಿದರು.

"ಹಾಗಾದರೆ ನೋಡಿಕೊಳ್ಳಿ" ಎಂದು ಕೋಪದಿಂದ ರಾಮು ಮನೆಯಲ್ಲಿದ್ದ ಪೆಟ್ಟಿಗೆಗಳನ್ನೂ, ಮೂಟೆಗಳನ್ನೂ ಎತ್ತಿ ಹಾಕಿದ.

"ಬನ್ರೋ, ಬನ್ರೋ. ನೋಡೋಣ" ಎಂದು ಹೇಳುತ್ತಾ ಹಲವರು ಮನೆಯೊಳಕ್ಕೆ ನುಗ್ಗಿದರು. ಪೆಟ್ಟಿಗೆಗಳನ್ನು ತೆಗೆದರು; ಮೂಟೆಗಳನ್ನು ಬಿಚ್ಚಿ ನೋಡಿದರು. ಕಳೆದು ಹೋದವೆಂದುಕೊಂಡಿದ್ದ ಸೀರೆಕುಪ್ಪಸಗಳೆಲ್ಲಾ ಆ ಮನೆಯಲ್ಲಿ ಸಿಕ್ಕಿದವು.

ಊರಲ್ಲಿಲ್ಲದಾಗ ಕಳ್ಳರ ಗುಂಪಿನವರು ರಾಮುವಿದ್ದ ಮನೆಯ ಅಕ್ಕಪಕ್ಕದ ಮನೆಯವರ ಬೆಲೆಬಾಳುವ ಸೀರೆಗಳನ್ನು ಚೋರಿಮಾಡಿ ರಾತ್ರಿಯಲ್ಲಿಯೇ ತಂದು "ಅಮ್ಮಾ, ಇವುಗಳೆಲ್ಲವನ್ನೂ ನಿಮ್ಮ ಯಜಮಾನರು ಕಳುಹಿಸಿದರು" ಎಂದು ರಾಮುವಿನ ಹೆಂಡತಿಗೆ ಕೊಡುತ್ತಾ ಬಂದರು.

ತಿಳಿಗೇಡಿಯಾದ ಆಕೆ ಇದು ನಿಜವೆಂತಲೇ ನಂಬಿ ಸೀರೆಗಳನ್ನು ಸಂತೋಷದಿಂದ ತೆಗೆದುಕೊಳ್ಳುತ್ತಿದ್ದಳು. ತನ್ನ ಸಂತೋಷವನ್ನು ಇತರರೊಂದಿಗೆ ಹಂಚಿಕೊಳ್ಳುವ ಆಶೆ ಆಕೆಗೆ. ಆದುದರಿಂದ ನೆರೆಹೊರೆಯವರನ್ನು ಕರೆದು "ನೋಡಿದಿರಾ, ನಮ್ಮ ಯಜಮಾನರು

ಸ್ಪಷ್ಟವಾಗಿ ಕಾಣಿಸುತ್ತಿರುವಾಗ ಇಲ್ಲವೆಂದು ಹೇಗೆ ತಾನೇ ಹೇಳುತ್ತಾನೆ, ರಾಮು! "ನಾನಲ್ಲ" ಎಂದು ಹೇಳಿದರೆ ನಂಬುವವರಾದರೂ ಯಾರು? ಗ್ರಾಮಸ್ಥರು ಕುಪಿತರಾದರು. ರಾಮುಗೆ ಛೀಮಾರಿ ಹಾಕಿದರು. ಕೆಲವರು ಆತನನ್ನು ಹೊಡೆಯಲೂಸಹ ಹಿಂಜರಿಯಲ್ಲಿಲ್ಲ. ಊರಿನಲ್ಲೆಲ್ಲಾ ರಾಮು ಕಳ್ಳನೆಂಬ ಅಪವಾದ ಹರಡಿತು.

ಹೀಗೆ ಏಟುತಿಂದ ರಾಮುಗೆ ಏನೂ ಅರ್ಥವಾಗಲಿಲ್ಲ. ಇದೆಲ್ಲಾ ಹೆಂಡತಿ ಮಾಡಿದ ಮೋಸವೆಂದು ನೆನೆಸಿ, ಅವಳನ್ನು ಮೂಳೆ ಮುರಿಯುವಂತೆ ಚಚ್ಚಿ ಹಾಕಿದ.

'ಏನಿದು ನಾಟಕ?' ಎಂದು ರಾಮು ಗುಡುಗಿದ. ಆಕೆ ದಿಗ್ಮೂಢಳಾಗಿ ನಿಂತಿದ್ದಳೇ ಹೊರತು ಒಂದು ಮಾತೂ ಆಡಲಿಲ್ಲ. ಆಕೆ ಯಾದರೂ ಏನು ಹೇಳುವಳು? ಆಕೆಗೂಸಹ ಇದೆಲ್ಲಾ ಆಗನ್ಯವಾಗಿ ತೋರಿತು. ಯಾರೋ ಮೋಸಗಾರನು ತಮ್ಮನ್ನು ಬೀದಿಯಪಾಲು ಮಾಡಲು ಮಾಡಿದ ಹಂಚಿಕೆಯೆಂದೂ, ಹೇಗಾದರೂ ಅವನನ್ನು ಹಿಡಿದು ತಕ್ಕ ಶಾಸ್ತಿ ಮಾಡಬೇಕೆಂದೂ ಆಕೆ ನಿರ್ಧರಿಸಿದಳು. ಮರುದಿನ ಬುದ್ಧಿವಂತನಾದ ರಾಮು ಹೆಂಡತಿಯೊಂದಿಗೆ 'ಲೇ, ಜರೂರಾಗಿ ನಾನು ಪಕ್ಕದ ಊರಿಗೆ ಹೋಗಬೇಕು. ಮತ್ತೆ ಬರಲು ಒಂದು ವಾರವಾಗ ಬಹುದು" ಎಂದು ಹೇಳಿದ. ನಿಜವೆಂತಲೇ ನಂಬಿದಳು ಮೂರ್ಖಳಾದ ಆ ಹೆಂಡತಿ.




ಹಗಲೆಲ್ಲಾ ಊರಾಚೆ ಕಾಲಕಳೆದು, ರಾತ್ರಿ ವೇಳೆಗೆ ರಾಮು ಮನೆಯ ಬಳಿ ಬಂದ. ರಾತ್ರಿಯಲ್ಲಿ ಸೀರೆ ತಂದು ಕೊಡುವವನನ್ನು ಹಿಡಿಯಲು ಮೆಲ್ಲನೆ ಒಳಗೆ ಪ್ರವೇಶಿಸಲು ಪ್ರಯತ್ನಿಸಿದ. ಆಗ ಏನಾಯಿತು ಗೊತ್ತೆ?

ಸೀರೆ ತಂದುಕೊಡುತ್ತಿದ್ದ ಕಳ್ಳನನ್ನು ಹಿಡಿದು ತಕ್ಕ ಶಾಸ್ತಿ ಮಾಡಬೇಕೆಂದು ದೀಕ್ಷೆವಹಿಸಿದ್ದ ರಾಮು ಹೆಂಡತಿ ನಿದ್ರೆಹೋಗದೆ ಸುಮ್ಮನೆ ಹಾಸಿಗೆಯಮೇಲೆ ಮಲಗಿದ್ದಳು. ಅರ್ಧರಾತ್ರಿ ಸಮಯದಲ್ಲಿ ಯಾರೊ ಬರುತ್ತಿದ್ದ ಸಪ್ಪಳ ಕೇಳಿಸಿತು. ಮಸಕು ಮಸಕಾಗಿ ಮನುಷ್ಯನ ನೆರಳು ಕಾಣಿಸಿತು. ಕಳ್ಳನೇ ಬರುತ್ತಿರುವನೆಂದು ನೆನೆಸಿದಳು ಆಕೆ. ಸದ್ದುಮಾಡದೆ



ಮೆಲ್ಲನೆ ಹಾಸಿಗೆಯಿಂದ ಎದ್ದಳು. ಚೂರಿಯೊಂದನ್ನು ಕೈಗೆ ತೆಗೆದುಕೊಂಡಳು. ಕಳ್ಳನನ್ನು ಕಂಡ-ಹಿಡಿಯಬೇಕೆಂದು ರಾಮು ಪ್ರಯತ್ನ. ಕಳ್ಳನನ್ನು ಹಿಡಿದು ಶಿಕ್ಷಿಸಬೇಕೆಂದು ಅವನ ಹೆಂಡತಿಯ ಆತುರ. ರಾಮು ಮೆಲ್ಲನೆ ಪ್ರವೇಶಿಸಿ ಕಿಟಕಿ ಕಟಕಟಿಯಿಂದ ಒಳಕ್ಕೆ ಇಣಿಕಿ ನೋಡಿದ.

ರಾಮು ಕಿಟಕಿ ಹತ್ತಿರ ನಿಂತು ನೋಡುತ್ತಿರುವಾಗ ಅವನ ಹೆಂಡತಿ ಗಬಗಬನೆ ಬಂದು 'ಸಿಕ್ಕಿದೆಯಾ ಸೀರೆ ಕಳ್ಳ' ಎಂದುಕೊಂಡು ಕೈಲಿದ್ದ ಚೂರಿಯಿಂದ ಅವನ ಮೂಗನ್ನು ಕೊಯ್ಯಲು ಹವಣಿಸಿದಳು. ರಾಮು ಗಾಬರಿ ಬಿದ್ದ. ಕಳ್ಳನಮೇಲೆ ದೃಷ್ಟಿಯಿಟ್ಟುಕೊಂಡಿದ್ದ ರಾಮೂಗೆ ಒಮ್ಮೆಲೆ ನೋವಾಗಿ ಆ ಕತ್ತಲಲ್ಲಿ ತನ್ನ ಮೂಗನ್ನು ಹಿಡಿದುಕೊಂಡಿರುವವರು ಯಾರೋ ತಿಳಿಯಲಿಲ್ಲ. ಮೋಸಗಾರನೇ ಮಾಡುತ್ತಿರಬೇಕೆಂದು ಅವನ ಊಹೆ.

ಮೂಗು ಕೊಯಿದ ಕಾರಣ ನೋವಿನಿಂದ ಮನೆಯ ಹೆಂಚುಗಳು ಹಾರಿಹೋಗುವಂತೆ ಅರಚಿದ ರಾಮು. ಈ ಕಿರಿಚಾಟ ಕೇಳಿ ನೆರೆಹೊರೆಯವರು ಬಂದು ತಮ್ಮನ್ನು ರಕ್ಷಿಸಿ, ಕಳ್ಳನನ್ನು ಹಿಡಿದುಕೊಳ್ಳುವರೆಂದು ಅವನು ಭಾವಿಸಿದ್ದ. ದಂಪತಿಗಳಿಬ್ಬರೂ ಇಷ್ಟು ಅವಾಂತರ ಮಾಡಿದ ಮೋಸಗಾರನನ್ನು ಹಿಡಿಯುವ ಆತುರದಲ್ಲಿದ್ದಾರೆ. ಕಣ್ಣಿಗೆ ಕಾಣಿಸದೆ ಈ ಆಟವನ್ನು ಆಡುತ್ತಿದ್ದ ಕಳ್ಳನನ್ನು ಹಿಡಿದೇ ತೀರಬೇಕೆಂದು ಅವರು ಹಠ ಹಿಡಿದಿರುವರು.

ಇಂತಹ ಸಮಯದಲ್ಲಿ ಮೊದಲು ಕಾಣಿಸಿಕೊಂಡವನು ಲಕ್ಷ್ಮಣ. ಆ ಅವಸ್ಥೆಯಲ್ಲಿ ಲಕ್ಷ್ಮಣನನ್ನು ಕಂಡಕೂಡಲೇ ರಾಮು ಮತ್ತು ಅವನ ಹೆಂಡತಿ ನಾಚಿಕೆಯಿಂದ ಮುಖ ಕೆಳಗೆ ಮಾಡಿದರು.

ಕೂಡಲೇ ಲಕ್ಷ್ಮಣನು ಅಣ್ಣನ ಮೂಗಿಗೆ ಕಟ್ಟುಕಟ್ಟಿ, ಸಮಾಧಾನಮಾಡಿ, ಅವನ ಪಾದಗಳ ಮೇಲೆ ಬಿದ್ದು, ಕ್ಷಮಿಸುವಂತೆ ಪ್ರಾರ್ಥಿಸಿ "ಅಣ್ಣಾ, ನನ್ನ ಅಪರಾಧವನ್ನು ಮನ್ನಿಸು. ನಾನು ಮನೆ ಬಿಟ್ಟು ಹೋದಾರಭ್ಯ ನಿನಗೆ ಉಂಟಾದ ಕಷ್ಟಗಳೆಲ್ಲಾ ನನ್ನಿಂದಲೇ ಆದವು. ಆಗಿಹೋದುದಕ್ಕೆ ಚಿಂತಿಸಬೇಡ. ನಿನ್ನ ಕಷ್ಟ

ಗಳೆಲ್ಲ ಇನ್ನು ಮುಗಿದುಹೋದುವು" ಎಂದ. ರಾಮುಗೆ ಇದೊಂದೂ ಅರ್ಥವಾಗಲಿಲ್ಲ.

ಆಗ ಲಕ್ಷ್ಮಣನು ಅಣ್ಣನನ್ನು ನೆಮ್ಮದಿಯಾಗಿರುವಂತೆ ಹೇಳಿದ. ಬಳಿಕ ಅಣ್ಣ ಮತ್ತು ಅತ್ತಿಗೆಯರೊಂದಿಗೆ ಅಡವಿಯಲ್ಲಿದ್ದ ತನ್ನ ಮನೆಗೆ ಹೋದ.

ಅಲ್ಲಿ ಹೋಗಿ ನೋಡಲು ರಾಮೂಗೆ ತನ್ನ ಹಸು ಅಲ್ಲಿರುವುದು ಕಾಣಿಸಿತು. ಅನೇಕ ಮಂದಿ ಕಳ್ಳರು ಕೈಕಟ್ಟಿ ವಿನಯದಿಂದ ನಿಂತಿರುವುದನ್ನು ಕಂಡ. ಅವನು ಆಶ್ಚರ್ಯಚಕಿತನಾದ. ತಾಯಿ ಎದುರು ಬಂದು "ಮಗೂ" ಎಂದು ಪ್ರೇಮಭರದಿಂದ ರಾಮುನನ್ನು ಅಪ್ಪಿಕೊಂಡಳು. ರಾಮು ದುಃಖವನ್ನು ತಡೆಯಲಾರದೆ ಸಣ್ಣ ಮಗುವಿನಂತೆ ಅಳಲು ಪ್ರಾರಂಭಿಸಿದ.

ಅವನು ಅಳುತ್ತಾ ತಾಯಿಯ ಕಾಲುಗಳ ಮೇಲೆ ಬಿದ್ದು "ಅಮ್ಮಾ, ಮಣ್ಣು ತಿಂದು ನಿನ್ನ ಸೊಸೆಯ ಮಾತು ಕೇಳಿ ನಿನಗೆ ನಾನಾ ಯಾತನೆ ಕೊಟ್ಟೆ. ಅವಳನ್ನು ನಂಬಿದ್ದೇ ನನ್ನ ಪ್ರಾಣಕ್ಕೆ ಬಂತು, ಕ್ಷಮಿಸಮ್ಮಾ" ಎಂದು ಬೇಡಿಕೊಂಡ.

ರಾಮು ಹೆಂಡತಿ ಸಹ ಅತ್ತೆಗೆ ನಮಸ್ಕಾರ ಮಾಡಿದಳು. ಕ್ಷಮಾಪಣೆ ಕೇಳಿಕೊಂಡಳು.

ಆ ತರುವಾಯ ಲಕ್ಷ್ಮಣನು ತಾನು ಮಾಡಿದ ಕೆಲಸಗಳೆಲ್ಲವನ್ನೂ ಮಣಿಪೋಣಿಸಿದಂತೆ ಅಣ್ಣನಿಗೆ ವಿವರಿಸಿದ. ತಾಯಿಯನ್ನು ಪೋಷಿಸಿದ ರೀತಿಯನ್ನೂ ತಿಳಿಸಿದ.




ಅಂದಿನಿಂದ ಅಣ್ಣತಮ್ಮಂದಿರಿಬ್ಬರೂ ಬಹಳ ಅನ್ಯೋನ್ಯವಾಗಿದ್ದರು. ತಮ್ಮನಂತೆಯೇ ರಾಮೂ ಸಹ ತಾಯಿಯನ್ನು ಭಕ್ತಿಯಿಂದ ಪೂಜಿಸುತ್ತಿದ್ದ.

ಲಕ್ಷ್ಮಣನು ತನ್ನನ್ನು ಆಶ್ರಯಿಸಿದ್ದ ಕಳ್ಳರನ್ನು ಸನ್ಮಾರ್ಗದಲ್ಲಿ ಬಾಳುವಂತೆ ಮಾಡಿದ. ಅವರು ಲಕ್ಷ್ಮಣನ ನಾಯಕತ್ವದಲ್ಲಿ ಪ್ರಜೆಗಳಿಗೆ ಅನೇಕ ಉಪಯುಕ್ತವಾದ ಕೆಲಸಗಳನ್ನು ಮಾಡುತ್ತಾ ಬಂದರು.

ಈ ರೀತಿ ಲಕ್ಷ್ಮಣನ ಒಳ್ಳೇ ನಡತೆಯಿಂದ ಅತ್ತ ಅಣ್ಣ ಮತ್ತು ಅತ್ತಿಗೆಯರು ಬುದ್ಧಿವಂತರಾದರು, ಇತ್ತ ಕಳ್ಳರು ಸನ್ಮಾರ್ಗಿಗಳಾಗಿ ಪ್ರಜಾಸೇವೆ ಮಾಡುತ್ತಾ ಬಂದರು.

## ಕಟ್ಟೆಬಲ್ಲವರಿಗೆ

ಇಲ್ಲಿ ಒಂದೊಂದು ಪದ್ಯದ ಕಡೆಯ ಪಾದ ಮಾತ್ರವೇ ಕೊಡುತ್ತೇವೆ. ಆ ಪಾದಕ್ಕೆ ಸರಿಯಾದ ಅರ್ಥ ಬರುವಂತೆ ಒಂದು ಪದ್ಯದ ಸೊಲ್ಲಾಗಿ ಕಟ್ಟಬೇಕು. ಉದಾಹರಣೆಗೆ ಒಂದನ್ನುಮಾತ್ರ ನಾವಿಲ್ಲಿ ಕಟ್ಟಿತೋರಿಸಿದ್ದೇವೆ. ಇನ್ನೊಂದನ್ನು ನೀವು ಕಟ್ಟಿ ಜೂನ್ 5 ನೇ ತಾರೀಕಿನೊಳಗೆ ಕಳಿಸಿ. ಉತ್ತಮವಿದ್ದುದನ್ನು ಮುಂದಿನ ತಿಂಗಳು ಪ್ರಕಟಿಸುತ್ತೇವೆ.

೧. ಕಪ್ಪಯ್ಯನ ಒತ್ತಿ ಎಳೆದು ಒಯ್ದರು ಹೊರಗೆ.

೨. ತುರುವನ್ನೊರೆಸುತ್ತೆ ತಿಂದು ತೇಗಿದ ಭರದಿಂ.

೧–ರ ಉತ್ತರ:

ಅಪ್ಪನೊಡನೆ ಸೆಣಸಿ ಮನೆಯ
ಕಪ್ಪು ಎಗುರುವಂತೆ ಕೂಗಿ
ತಪ್ಪುಗೈಯೆ ಜನರು ಸೇರಿ
ಅಪ್ಪಿ ಹಿಡಿದು ಎನ್ನಾ ಚಿ
ಕ್ಕಪ್ಪಯ್ಯನ ಒತ್ತಿ ಎಳೆದು ಒಯ್ದರು ಹೊರಗೆ

## ಚಕ್ಕುಲಿ

ಸುತ್ತು ಸುತ್ತು ಚಕ್ಕುಲಿ
ಗಮ ಗಮಿಸುವ ಚಕ್ಕುಲಿ
ಕೈಲಿಕರಿದ ಚಕ್ಕುಲಿ
ಅಮ್ಮ ಕೊಟ್ಟ ಚಕ್ಕುಲಿ
ಹಳದಿ ಕೆಂಪು ಚಕ್ಕುಲಿ
ಕರಕುಕಟುಂ ಚಕ್ಕುಲಿ
ಚಕ್ರದಂಥ ಚಕ್ಕುಲಿ
ಮಕ್ಕಳ ಪ್ರಿಯ ಚಕ್ಕುಲಿ
ಎಲ್ಲಕಡೆಯು ಚಕ್ಕುಲಿ
ಯಾವಾಗಲು ಸಿಕ್ಕಲಿ.

ಆರ್. ಸಿದ್ದಜಂಗಪ್ಪ

## ಒಗಟುಗಳು

೧. ನುಚ್ಚಿನಂಗಡಿ, ನೂರೊಂದಂಗಡಿ, ಪಟ್ಟೆ ಹಾಕಿದ ಪಂಡಿತರಂಗಡಿ, ಮುಚ್ಚಿ ನೋಡಿದರೆ ಒಂದೇ ಅಂಗಡಿ. ಇದು ಏನು?

೨. ಮೇಲೆ ನೋಡಿದರೆ ನಾನಾ ಬಣ್ಣ, ಉಜ್ಜಿಕೊಂಡರೆ ಬಿಳೀ ಬಣ್ಣ.

೩. ಬೀದಿಯಲಿ ಮಾರೋಣ ಹೆಗಲೇರಿ ಬರುವಳು, ಬಾಯೆಂದು ಕರೆದರೆ ಓಯೆನ್ನುತಿಹಳು, ಕರೆದ ಭಾಮಿನಿಯರ ಕೈಯ ನೇರುವಳು.

೪. ಕಂಚಿನ ತಟ್ಟೆ, ಕುಸುಮೇರಾಶಿ, ಐದು ಮಂದಿ ಆಡ್ತಾರೆ, ಇಬ್ಬರು ನೋಡ್ತಾರೆ. ಬಿಳೀ ಕಾವಲುಗಾರ್ರ ದಾಟಿ ಒಳಗಡೆಗೆ ಹೋದರೆ ಪರೀಕ್ಷಕನೊಬ್ಬ ಬಾರದೂರಿಗೆ ಕಳಿಸ್ತಾನೆ.

೫. ಬೆಳ್ಳಿಗಿಂಡಿಲಿ ಚಿನ್ನದ ಚೂರು.

೬. ಚಿಂತಾಮಣಿ ಕೆರೇಲಿ ಚಿಣಿಮಿಣಿ ಹಕ್ಕಿ, ಕೆರೆ ಬತ್ತಿದರೆ ಹಕ್ಕಿ ಹಾರಿ ಹೋಯಿತು.

೭. ಸರ್ರನೆ ಹೋಗುತ್ತೆ, ಭರ್ರನೇ ಬರುತ್ತೆ.

೮. ಹೊರಗಿನ ಕೋಟೆ ಶೃಂಗಾರ, ಒಳಗಿನ ಕೋಟೆ ಬಿಳಿಮಣಿಕಾರ, ಒಳಹೊಕ್ಕರೆ ಹಾಹಾಕಾರ.

೯. ಬಿಳಿಯ ಹೊಲದಲ್ಲಿ ಕರಿಯ ಬೀಜವನ್ನು ಹಾಕಿರುವುದು ಕೈಯಲ್ಲಿ, ಆರಿಸುವುದು ಬಾಯಿಯಲ್ಲಿ.

೧೦. ಮರಕಂಡರೆ ಏರುತ್ತೆ, ಇಲ್ಲದಿದ್ದರೆ ಮಲಗುತ್ತೆ. ನೀರಿಲ್ಲದಿದ್ದರೆ ಸಾಯುತ್ತೆ.

೧. ಪುಸ್ತಕ, ೨. ಸೋಪು, ೩. ಬಳೆ, ೪. ಅನ್ನ ಊಟ, ೫. ಎಲೆಕ್ಟ್ರಿಕ್ ಬಲ್ಬ್, ೬. ಎಣ್ಣೆ-ದೀಪ, ೭. ಒನಕೆ, ೮. ಮೆಣಸಿನಕಾಯಿ, ೯. ಕಾಗದ-ಅಕ್ಷರ-ಓದು, ೧೦. ಬಳ್ಳಿ.

## ಚುಟುಕಗಳು

ನನ್ನ ಅಣ್ಣ ಜಾಕಿ
ಆಡುತಿದ್ದ ಹಾಕಿ
ಹಾಕಿ ಆಟ
ಆಡುವಾಗ
ಹಾಕುತಿದ್ದ ಬಾಕಿ.

—ಲಕ್ಷ್ಮಿ ಎ. ವಿ.

*　*　*

ಗೋಪು ಹುಡುಗ
ಬಹಳ ತುಡುಗ
ತುಡುಗು ಮಾಡಿ
ಸಿಕ್ಕಿಬಿದ್ದು
ಪಡೆದ ಪೋಲೀಸ್ ಕಡಗ.

—ಶ್ಯಾಮರಾವ್ ಕುಲಕರ್ಣಿ

*　*　*

ರಾಮು ತುಂಬ ತುಂಟ
ಪೋಲಿಗಳ ಬಂಟ
ತಪ್ಪು ಮಾಡಿ
ಕುಸ್ತಿಯಾಡಿ
ಆದನೀಗ ಕುಂಟ.

—ಶ್ರೀಕೃಪಾ

*　*　*

ಕೋಲಾರದಲ್ಲಿ ಸಿಗುವುದು ಚಿನ್ನ
ಆದರು ಜನರು ತಿಂಬುದು ಅನ್ನ
ಅನ್ನವು ಇಲ್ಲದೆ ಚಿನ್ನವ ತಿಂದು
ಬದುಕಬಹುದೇ ಅಣ್ಣ ?

—" ಜಯವೀರ "

## ನಗೆಹನಿ

ಉಪಾಧ್ಯಾಯ:–ನಾಮಪದ – ಇದರ ಅರ್ಥ ವೇನು?

ಹುಡುಗ:-ನಾವೂ ಹಾಕ್ಕೊಂಡು ಹಾಡುತ್ತಾ ಬರುವ ದಾಸಯ್ಯಾ ಸಾರ್.

—ಎಂ. ನಾಗರಾಜು

*　*　*

ತಂದೆ:–ಕೂತುಕೊಂಡು ತಿನ್ನೊ, ನಿಂತು ತಿನ್ನ ಬೇಡ್ವೋ.

ಮಗ:–ಇಲ್ಲಪ್ಪಾ, ಕೂತು ತಿಂದರೆ ಕುಬೇರನ ಹೊನ್ನೂ ಸಾಲದು ಅಂತ ಗುರುಗಳು ಹೇಳಿದ್ದಾರಪ್ಪಾ,

—ಅ. ಕ. ಜಾಗೀರದಾರ

*　*　*

ಟೀಚರ್ ; ಏನೋ ಎಡಕಿವಿಯನ್ನು ಮುಚ್ಚಿ ಕೊಂಡಿರುವಿಯೇಕೆ?

ಹುಡುಗ:–ನೀವು ಹೇಳಿದ್ದೆಲ್ಲಾ ಒಂದು ಕಿವಿ ಯಿಂದ ಕೇಳಿ ಇನ್ನೊಂದು ಕಿವಿಯಿಂದ ಬಿಡ ಬಾರದೆಂತ ಅಮ್ಮ ಹೇಳಿದ್ದಾಳೆ.

—ಜಿ. ಎಲಿಯೇಸರ್, ಮಂಗಳೂರು

*　*　*

ಮಗ:–ಅಮ್ಮಾ, ಅಪ್ಪ ಹಣ್ಣು ತರೋದು ಯಾವಾಗ?

ತಾಯಿ:–ಐದು ಹೊಡೆದ ಮೇಲೆ ಬರ್ತಾರೆ ಮಗು.

ಮಗ:–ಐದನ್ನೂ ಅಪ್ಪ ಹೊಡೆದು ಬಿಟ್ರೆ ಮನೆಗೆಷ್ಟು ತಂದಾರು?

—ಎಲ್. ಎನ್. ಕಟ್ಟಿ

# ರತ್ನಗೋಳ (ಹಿಂಬದಿಯ ಚಿತ್ರಕಥೆ-೨)

ತನ್ನ ದೇಶದಲ್ಲಿ ಮದುವೆಗೆ ಮುಂಚೆ ಹಿಟ್ಸೊ ತನ್ನ ಇಷ್ಟದೈವವಾದ ದೇವಿಯ ಮುಂದೆ ಹೇಳಿಕೊಂಡ ಹರಕೆ ಸದಾಕಾಲವೂ ಅವಳ ಮನಸ್ಸನ್ನು ಕುರು ಕುರು ಮಾಡುತ್ತಿತ್ತು. ಅದನ್ನು ತೀರಿಸುವ ಬಗೆಯನ್ನೆ ನೆನೆದುಕೊಂಡಿದ್ದಳು. ಇದು ಅವಳ ಮುಖಲಕ್ಷಣದಿಂದಲೇ ಅವಳ ಪತಿಗೆ ತಿಳಿಯಿತು. ಕಾರಣವನ್ನು ಕೇಳಿದ. ಆಗ ಅವಳು ತನ್ನ ಹರಕೆಯ ವಿಷಯವನ್ನು ಹೇಳಿಕೊಂಡಳು. ಅವಳ ಕೋರಿಕೆ ತೀರಿಸುವುದೇ ಅವನಿಗೂ ಮುಖ್ಯ ಸಂತೋಷವೆನಿಸಿತು.

ಅಮೂಲ್ಯವಾದ ವಸ್ತು ಯಾರಬಳಿಯಲ್ಲಿದ್ದರೂ ತಂದೊಪ್ಪಿಸಬೇಕೆಂದು ದೇಶದಲ್ಲೆಲ್ಲಾ ಡಂಗುರ ಸಾರಿಸಿದ ಚೀನಾ ಚಕ್ರವರ್ತಿ. ಇದನ್ನು ಕೇಳಿ ಅನೇಕ ಅರಸರೂ ದೊಡ್ಡ ದೊಡ್ಡ ವರ್ತಕರೂ, ಸಂಸ್ಥಾನಾಧಿಪತಿಗಳೂ ಬೆಲೆಬಾಳುವ, ವಿಶೇಷವಾದ, ವಿಚಿತ್ರವಾದ, ಆಶ್ಚರ್ಯಕರವಾದ ಅನೇಕ ವಸ್ತು ಒಡವೆಗಳನ್ನು ಆಸ್ಥಾನಕ್ಕೆ ತಂದು ಒಪ್ಪಿಸಿದರು. ಅವುಗಳನ್ನೆಲ್ಲಾ ನೋಡಲು ಎರಡು ಕಣ್ಣುಗಳೂ ಸಾಲದಾದುವು.

ಚಕ್ರವರ್ತಿಯ ಬಳಿಯಲ್ಲೇ ಕುಳಿದ್ದಳು ಹಿಟ್ಸೊ. ಅವಳು ಎಲ್ಲ ವಸ್ತುಗಳನ್ನೂ ನೋಡಿದಳು. ಒಂದೂ ಅವಳಿಗೆ ನಚ್ಚಲಿಲ್ಲ. ಕಟ್ಟಕಡೆಗೆ ಅವಳು ನಚ್ಚಿದ್ದು ನಿಜವಾಗಿಯೂ ಒಂದು ವಿಶೇಷ ವಸ್ತುವಾಗಿತ್ತು. ಅದನ್ನೇ ತನ್ನ ಇಷ್ಟದೇವಿಗೆ ತಕ್ಕ ಕಾಣಿಕೆಯೆಂದು ಅವಳು ಆರಿಸಿಕೊಂಡಳು. ಅದೇನು ಗೊತ್ತೆ? ಕಾಳಕತ್ತಲೆಯಲ್ಲಿ ಕೂಡಾ ಬೆಳಕಾಗಿ ಹೊಳೆಯುವಂತಹ ರತ್ನಗೋಳವದು!

ಹಿಟ್ಸೊ ಆ ರತ್ನಗೋಳವನ್ನು ಒಂದು ಬಂಗಾರದ ಕರಡಿಗೆಯಲ್ಲಿ ಭದ್ರಮಾಡಿ, ವಿಶ್ವಾಸದ ವೀರನಾದೊಬ್ಬ ಕಾಪ್ತಾನನ ವಶಕ್ಕೆ ಕೊಟ್ಟು, "ಅಯ್ಯಾ ಕಾಪ್ತಾನ್, ಇದನ್ನು ಪ್ರಾಣ ಸಮಾನವಾಗಿ ನೋಡಬೇಕು ತಿಳಿಯಿತೆ? ಇದನ್ನು ಭದ್ರವಾಗಿ ತೆಗೆದುಕೊಂಡು ಹೋಗಿ ನಮ್ಮೂರಿನ ದೇವಿಯ ಆಲಯದಲ್ಲಿರುವ ಪೂಜಾರಿಗೆ ಒಪ್ಪಿಸಬೇಕು" ಎಂದು ಎಚ್ಚರಿಸಿ ಕಳುಹಿಸಿದಳು.

ಕೆಲವುಮಂದಿ ವೀರರನ್ನು ಸಹಾಯಕ್ಕೆ ತೆಗೆದುಕೊಂಡು ಆತನು ಹೊರಟನು. ಅವನ ಹಡಗು ಜಪಾನು ದೇಶದಕಡೆಗೆ ಸುರಕ್ಷಿತವಾಗಿಯೇ ಹೋಯಿತು. ಜಪಾನು ತೀರವು ಸ್ವಲ್ಪ ದೂರದಲ್ಲಿದೆ ಯೆನ್ನುವಾಗ ಸಮುದ್ರದಲ್ಲಿ ದೊಡ್ಡ ತುಫಾನೆದ್ದಿತು. ಬರುಬರುತ್ತೆ ತುಫಾನಿನ ವೇಗವು ಜಾಸ್ತಿಯಾಗಿ, ಹಡಗು ದಿಕ್ಕುತಪ್ಪಿ ಚಲಿಸತೊಡಗಿತು. ಎಷ್ಟು ಸಮಾಳಿಸಿದರೂ ಹಡಗು ಹೊಯ್ದಾಡ ತೊಡಗಿತು. ಆ ವೀರ ಕಾಪ್ತಾನನ ಧೈರ್ಯವು ಸಡಲಿತು. ಆದರೆ—

## ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ 10 ರೂ.

1954 ಆಗಸ್ಟ್ ಸಂಚಿಕೆಯಲ್ಲಿ ಪ್ರಕಟಿಸುವ ಫೋಟೋಗಳ ಮಾದರಿ :





ಮೇಲಿನ ಫೋಟೋಗಳಿಗೆ ಒಂದಕ್ಕೊಂದು ಸಂಬಂಧಿಸಿದಂತಿರುವ ಒಂದು ಜತೆ (ಎರಡು) ಶೀರ್ಷಿಕೆಗಳನ್ನು ಪೋಸ್ಟ್ ಕಾರ್ಡಿನಲ್ಲಿ ಬರೆದು ಈ ಕೆಳಗಿನ ವಿಳಾಸಕ್ಕೆ, ಜೂನ್ 7 ನೇ ತಾರೀಕಿನೊಳಗೆ ನಮಗೆ ಬಂದು ತಲಪುವಂತೆ ಕಳಿಸತಕ್ಕದ್ದು. ನಂತರ ಬಂದವುಗಳನ್ನು ಗಮನಿಸುವುದಿಲ್ಲ.
ವಿಳಾಸ : ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದ್ರಾಸು-26.

---

### ಈ ತಿಂಗಳ ಫೋಟೋ ಶೀರ್ಷಿಕೆಯ ಸ್ಪರ್ಧೆಯ ಫಲಿತ

ಮೊದಲನೇ ಫೋಟೋ : ನಿಡುಪಯಣದ ಸನ್ನಾಹ.

ಎರಡನೇ ಫೋಟೋ : ಬೀಳ್ಕೊಡುವ ಉತ್ಸಾಹ.

ಕಳಿಸಿದವರು : ಎಂ. ರಾಮರಾವ್,

ನಂ. 44 ತಂಬೀಚೆಟ್ಟಿಬೀದಿ, ಮದರಾಸು-1

ಬಹುಮತಿ ರೂ. 10/- ನ್ನು ಈ ತಿಂಗಳಿನಲ್ಲಿ ಕಳುಹಿಸಲ್ಪಡುತ್ತದೆ.

# ಚಿತ್ರ ಕಥೆ



T. K.

ತಮ್ಮ-ತಂಗಿಯರಿರ, ಈ ಮೇಲಿನ ನಾಲ್ಕು ಚಿತ್ರಗಳನ್ನೂ ಕ್ರಮವಾಗಿ ನೋಡುತ್ತಾ ಹೋಗಿ. ಆಗ ಒಂದು ಸಣ್ಣ ಹಾಸ್ಯಕಥೆ ನಿಮಗೆ ಗೊತ್ತಾದೀತು. ಗೊತ್ತಾಗದಿರುವವರು ಬರುವ ತಿಂಗಳ 'ಚಂದಮಾಮ'ನನ್ನು ನೋಡಿ ತಿಳಿದುಕೊಳ್ಳಿ. ಸರಿತಾನೆ?

Printed by B. NAGI REDDI at the B. N. K. Press Ltd., Madras 26, and Published by him for Chandamama Publications, Madras 26, Controlling Editor : SRI 'CHAKRAPANI'

Photo by P. K. Patel




ಬಹುಮಾನ
ಪಡೆದ ಶೀರ್ಷಿಕೆ

ಬೀಳ್ಕೊಡುವ ಉತ್ಸಾಹ

ಕಳಿಸಿದವರು:
ಎಂ. ರಾಮರಾವ್

